# ಕನ್ನಡ

# ವಾಚನಮಾಲೆ

## ಎರಡನೆಯ ಪುಸ್ತಕ

(REPRINT)
1954



೧೯೫೦

ಮುಂಬಯಿ ರಾಜ್ಯದ ವಿದ್ಯಾಖಾತೆಯಿಂದ ಪ್ರಕಟಿತವಾದುದು

ಬೆಲೆ: ೮ ಆಣೆ

# ಅರಿಕೆ

ನಮ್ಮ ಸಾಲೆಗಳಲ್ಲಿ ಉಪಯೋಗಿಸುವ ಪಠ್ಯ ಪುಸ್ತಕಗಳು ಯಾವ ತತ್ತ್ವಗಳನ್ನವಲಂಬಿಸಬೇಕೆಂಬುದನ್ನು ನಿರ್ಧರಿಸಲು ಮುಂಬಯಿ ಸರಕಾರದವರು ೧೯೪೪ರಲ್ಲಿ ಒಂದು ಸಮಿತಿಯನ್ನು ನಿರ್ಮಿಸಿದರು. ಆ ಸಮಿತಿಯವರು ಪಠ್ಯ ಪುಸ್ತಕಗಳನ್ನು ಹೇಗೆ ರಚಿಸಬೇಕೆಂಬ ಬಗ್ಗೆ ಹಲವು ತತ್ತ್ವಗಳನ್ನು ಗೊತ್ತುಪಡಿಸಿದರು. ಆ ತತ್ತ್ವಗಳಿಗನುಸರಿಸಿ ಕನ್ನಡ ಪ್ರಾಥಮಿಕ ಸಾಲೆಗಳ ೧—೪ ಇಯತ್ತೆಗಳಿಗಾಗಿ ಕ್ರಮಿಕ ವಾಚನಮಾಲೆಯನ್ನು ರಚಿಸಲು ಸರಕಾರದವರು ಕೆಳಗೆ ಕಾಣಿಸಿದ ಸದಸ್ಯರ ಸಮಿತಿಯನ್ನು ಏರ್ಪಡಿಸಿರುವರು.

೧. ಡಾ. ಶಿ. ಚೆ. ನಂದೀಮಠ, ಎಮ್ ಎ., ಪಿಎಚ್. ಡಿ. ( ಅಧ್ಯಕ್ಷ )

೨. ಪಂಡಿತ ಮ. ಪ್ರ. ಪೂಜಾರ

೩. ಪ್ರೊ. ಸ. ಸ. ಮಾಳವಾಡ, ಎಮ್. ಎ.

೪. ಶ್ರೀ. ರಾ. ವಿ. ದೇಸಾಯಿ, ಬಿ. ಎ., ಬಿ. ಟಿ.

೫. ಶ್ರೀ. ಮ. ಗು. ಹಂದ್ರಾಳ, ಬಿ. ಎ., ( ಆನರ್ಸ್ ), ಬಿ. ಟಿ. ( ಕಾರ್ಯದರ್ಶಿ )

ಈ ಸಮಿತಿಯವರು ರಚಿಸಿದ ವಾಚನಮಾಲೆಯಲ್ಲಿ ಈ ಪುಸ್ತಕವು ಮೂರನೆಯದು.

ಈ ಮಹನೀಯರು ಯಾವ ಪ್ರತಿಫಲವನ್ನೂ ಪಡೆಯದೆ ಉತ್ಸಾಹದಿಂದ ಕ್ರಮಿಕ ವಾಚನಮಾಲೆಯ ಕಾರ್ಯವನ್ನು ಕೈಕೊಂಡದ್ದಕ್ಕಾಗಿ ವಿದ್ಯಾಖಾತೆಯವರು ಅವರಿಗೆ ಋಣಿಯಾಗಿದ್ದಾರೆ.

ಪುಣೆ,
ತಾರೀಕು: ೨೦-೭-೪೯.

ದಾ. ಚಿಂ. ಪಾವಟೆ,
ಮುಂಬಯಿ ರಾಜ್ಯದ ಮುಖ್ಯ ವಿದ್ಯಾಧಿಕಾರಿ.

# ಸೂಚನೆ

ಮುಂಬಯಿ ಸರಕಾರದವರು ೧೯೪೯ರಲ್ಲಿ ಈಗ ಡಾಯರೆಕ್ಟರರಾಗಿರುವ ಶ್ರೀ ಡಿ. ಸಿ. ಪಾವಟೆ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿರ್ಮಿಸಿದ್ದರು. ಅವರು ಪಠ್ಯಪುಸ್ತಕಗಳನ್ನು ಹೇಗೆ ರಚಿಸಬೇಕೆಂಬ ಬಗ್ಗೆ ಕೆಲವು ತತ್ವಗಳನ್ನು ಗೊತ್ತುಪಡಿಸಿರುವರು. ಅವುಗಳಲ್ಲಿ ಕೆಳಗಿನವು ಮುಖ್ಯವಾದವುಗಳು :

೧. ಪಾಠಗಳು ಮಕ್ಕಳ ವಯಸ್ಸಿಗೂ, ಅವರ ಬುದ್ಧಿವಿಕಾಸದ ಮಟ್ಟಕ್ಕೂ ಅನುಸರಿಸಿರಬೇಕು.

೨. ಭಾಷೆ, ಶೈಲಿ, ವಿಷಯ ಇವು ಮಕ್ಕಳ ಶಬ್ದಸಂಗ್ರಹ ಮತ್ತು ಗ್ರಹಣಶಕ್ತಿ ಇವುಗಳಿಗೆ ನಿಲುಕುವಂತೆ ಇರಬೇಕು.

೩. ಪಾಠಗಳು ವಿಷಯಪ್ರಧಾನವಾಗಿರದೆ ಸಾಹಿತ್ಯ ದೃಷ್ಟಿಯಿಂದ ಮಕ್ಕಳ ಮನಸ್ಸನ್ನು ಸೆಳೆಯುವಂಥವಿರಬೇಕು.

೪. ಪಾಠಗಳು ಮಕ್ಕಳ ಜ್ಞಾನ, ಅಭಿರುಚಿ, ಶಬ್ದಸಂಗ್ರಹ ಇವನ್ನು ಕ್ರಮವಾಗಿ ವಿಕಾಸಗೊಳಿಸುವಂಥವಿರಬೇಕು.

೫. ಪಾಠಗಳು ನಮ್ಮ ರೀತಿ-ನೀತಿ, ರಾಷ್ಟ್ರದ ಸಂಸ್ಕೃತಿ ಇವುಗಳಿಗೆ ಪೋಷಕವಾಗುವಂಥವಿರಬೇಕು.

ಈ ತತ್ವಗಳಿಗನುಸರಿಸಿ ರಚಿಸಿದ ಪಠ್ಯಪುಸ್ತಕಗಳನ್ನು ಓದಲಿಕ್ಕೆ ಕಲಿಸುವಾಗ ಶಬ್ದ, ವಾಕ್ಯ, ಕಥಾಪದ್ಧತಿಗಳಲ್ಲಿ ಒಂದನ್ನು ಅನುಸರಿಸಬಹುದೆಂದು ಸೂಚಿಸಿರುವರು. ಇವುಗಳಲ್ಲಿ ಕಥಾಪದ್ಧತಿಯು ಶ್ರೇಷ್ಠವಾದುದು. ಪ್ರಚಲಿತವಿರುವ ಎಲ್ಲ ಭಾಷೆಗಳ ಕ್ರಮಿಕ ಪಠ್ಯಪುಸ್ತಕಗಳಲ್ಲಿ ಅದೇ ಪದ್ಧತಿಯನ್ನು ಅನುಸರಿಸಿರುವುದಾಗಿ ಕಂಡುಬರುತ್ತದೆ. ಒಂದು ವಿಷಯವನ್ನು ಮುಖ್ಯವಾಗಿಟ್ಟುಕೊಂಡು ಅದಕ್ಕನುಸರಿಸಿ ವಾಕ್ಯಗಳನ್ನು ರಚಿಸುವದಕ್ಕೆ ಕಥಾಪದ್ಧತಿಯೆಂದು ಹೇಳುವರು. ಈ ವಾಚನ ಮಾಲೆಯಲ್ಲಿ ಪ್ರಾಮುಖ್ಯವಾಗಿ ಇದೇ ಪದ್ಧತಿಯನ್ನು ಅನುಸರಿಸಲಾಗಿದೆ.

೨ನೆಯ ಪುಸ್ತಕದಲ್ಲಿ ಮಕ್ಕಳಿಗೆ ಓದುವ ಅಭಿರುಚಿ ಉಂಟಾಗುವಂತೆ ಪಾಠಗಳನ್ನು ಸಂಗ್ರಹಿಸಲಾಗಿದೆ. ಮೂಲಶಿಕ್ಷಣ ತತ್ವಗಳಿಗೆ ಅನುಗುಣವಾಗುವಂತೆ ಕೆಲವು ಪಾಠಗಳನ್ನು ಜೋಡಿಸಲಾಗಿದೆ. ಅವು ಪ್ರಾಮುಖ್ಯವಾಗಿ ಕೃತಿಪ್ರಧಾನವಾಗಿವೆ. ಮಕ್ಕಳ ಪ್ರತಿದಿವಸದ ಚಟುವಟಿಕೆ, ಪ್ರಕೃತಿ ನಿರೀಕ್ಷಣೆ, ಉಪಯುಕ್ತ ವಿಷಯ ಮೊದಲಾದವುಗಳನ್ನು ಗಮನಿಸಿ ಪಾಠಗಳನ್ನು ರಚಿಸಲಾಗಿದೆ. ಕೃತಿ ಪ್ರಧಾನವಾದ ಪಾಠಗಳನ್ನು ಕಲಿಸುವ ಮುಂಚೆ ಶಿಕ್ಷಕರು ಮಕ್ಕಳ ಕಡೆಯಿಂದ ಆವಶ್ಯಕ ಕೃತಿಗಳನ್ನು ಮಾಡಿಸಬೇಕು.

ಅಭ್ಯಸನಗಳು ವಿವಿಧವಾಗಿದ್ದು ಮಕ್ಕಳ ಬುದ್ಧಿವಿಕಾಸವನ್ನು ಪರೀಕ್ಷಿಸುವಂತಹವೂ ಮಕ್ಕಳ ಸಾಮಾನ್ಯ ಜ್ಞಾನವನ್ನು ಬೆಳಸುವಂತಹವೂ ಅವೆ. ಕರ್ತೃ, ಕರ್ಮ, ಕ್ರಿಯಾಪದಗಳನ್ನು ತಿಳಿಸಿ ವ್ಯಾಕರಣದ ಪರಿಚಯಮಾಡಿಕೊಡಲಾಗಿದೆ. ಶಿಕ್ಷಕರು ಹೆಚ್ಚು ಉದಾಹರಣೆಗಳನ್ನು ಕೊಟ್ಟು, ಮಕ್ಕಳಿಗೆ ಅವುಗಳನ್ನು ಮನನಮಾಡಿಸಬೇಕು. ಕೊನೆಗೆ ಕಠಿಣ ಶಬ್ದಗಳನ್ನು ಸಂಗ್ರಹಿಸಲಾಗಿದೆ. ಅಂತಹ ಶಬ್ದಗಳ ಅರ್ಥಗಳನ್ನು ಹುಡುಕುವ ರೀತಿಗಳನ್ನು ಶಿಕ್ಷಕರು ಮಕ್ಕಳಿಗೆ ತಿಳಿಸಿಕೊಡಬೇಕು.

ಶಿ. ಚೆ. ನಂದೀಮಠ,

ಅಧ್ಯಕ್ಷ, ಕನ್ನಡ ಪಠ್ಯಪುಸ್ತಕ ರಚನಾಸಮಿತಿ.

# ಪರಿವಿಡಿ


| ಪಾಠ | ವಿಷಯ | ಪುಟ |
|---|---|---|
| ೧ | ದಯಾಳು ಜವಾಹರ ... ... ... | ೧ |
| ೨ | ಸ್ವಚ್ಛತೆ ... ... ... | ೩ |
| ೩ | ಠಕ್ಕ ನರಿ ... ... ... | ೬ |
| ೪ | ಜಾಣಗಿಳಿ ... ... ... | ೮ |
| ೫ | ಪಾತರಗಿತ್ತಿ ಪಕ್ಕ (ಕವಿತೆ) ... ... | ೯ |
| ೬ | ಇಣಚಿ ... ... ... | ೧೧ |
| ೭ | ನರಿಯು ಜೀಣತನ ... ... ... | ೧೩ |
| ೮ | ದಿಕ್ಕುಗಳು ... ... ... | ೧೫ |
| ೯ | ನಾಡಿಗಾಗಿ ದುಡಿ ... ... ... | ೧೭ |
| ೧೦ | ಹಕ್ಕಿಯು ತೆರದಲಿ ಪಕ್ಕಗಳಿದ್ದರೆ (ಕವಿತೆ) ... ... | ೧೯ |
| ೧೧ | ಬಟ್ಟಲ ... ... ... | ೨೦ |
| ೧೨ | ಗಾಂಧಿಟೊಪ್ಪಿಗೆ ... ... ... | ೨೨ |
| ೧೩ | ಬೆಕ್ಕಿನ ಬಯಕೆ ... ... ... | ೨೪ |
| ೧೪ | ಚಂದಪ್ಪನ ಅಂಗಿ ... ... ... | ೨೬ |
| ೧೫ | ಮಂಗಗಳ ಉಪವಾಸ (ಕವಿತೆ) ... ... | ೨೯ |
| ೧೬ | ಸರತಿಯ ಸಾಲು ... ... ... | ೩೧ |
| ೧೭ | ವಿಟ್ಟಪ್ಪನ ಜಾಣತನ ... ... ... | ೩೪ |
| ೧೮ | ಡೊಂಬರ ಆಟ ... ... ... | ೩೭ |
| ೧೯ | ತಿಳಿಗೇಡಿ ಎಲ್ಲವ್ವ ... ... ... | ೪೦ |
| ೨೦ | ಸೀಗೆ ಹುಣ್ಣಿವೆ ... ... ... | ೪೨ |
| ೨೧ | ಆಕಳ ಕಥೆ ಭಾಗ ೧. (ಕವಿತೆ) ... ... | ೪೪ |
| ೨೨ | ಆಶೆಬುರುಕ ಮಂಗ ... ... ... | ೪೬ |
| ೨೩ | ಗಾಂಧೀಜಿಯವರ ಸರಳತನ ... ... | ೪೯ |

| ಪಾಠ | ವಿಷಯ | ಪುಟ |
| --- | --- | --- |
| ೧೪ | ದೀನರ ಸೇವೆ ... ... ... | ೫೨ |
| ೧೫ | ಜಾತ್ರೆ ... ... ... | ೫೪ |
| ೧೬ | ಆಕಳ ಕಥೆ ಭಾಗ ೨. (ಕವಿತೆ) ... ... | ೫೮ |
| ೧೭ | ಗಿಡಗಳ ಕೊರಗು ... ... ... | ೬೧ |
| ೧೮ | ತಾನೇಮಾಡುವದು ಉತ್ತಮ ... ... | ೬೩ |
| ೧೯ | ಈಶ್ವರಚಂದ್ರ ವಿದ್ಯಾಸಾಗರ ... ... | ೬೬ |
| ೨೦ | ಪಣತಿ ... ... ... | ೬೯ |
| ೨೧ | ಕಲ್ಲುಸಕ್ಕರೆ (ಕವಿತೆ) ... ... ... | ೭೨ |
| ೨೨ | ದೊಡ್ಡ ಕಪ್ಪೆ ... ... ... | ೭೫ |
| ೨೩ | ಒಕ್ಕಲಿಗನ ನೀಲಪ್ಪ ... ... ... | ೭೭ |
| ೨೪ | ಹುಚ್ಚ ಕುರಿಯಮರಿ ... ... ... | ೮೦ |
| ೨೫ | ವಚನಗಳು ... ... ... | ೮೩ |
| ೨೬ | ನೀಲ ಬಣ್ಣದ ನರಿ ... ... ... | ೮೫ |
| ೨೭ | ಶಿಷ್ಯರ ಪರೀಕ್ಷೆ ... ... ... | ೮೭ |
| | ಕಠಿಣ ಶಬ್ದಗಳ ಅರ್ಥ ... ... ... | ೯೪ |




# ೧. ದಯಾಳು ಜವಾಹರ

ಜವಾಹರರು ನಮ್ಮ ನಾಡಿನ ಮುಂದಾಳು. ಅವರು ಹುಟ್ಟಿದ ಊರು ಅಲಹಾಬಾದ. ಅವರ ತಂದೆಯ ಹೆಸರು ಮೋತೀಲಾಲ. ಅವರ ಮನೆತನದ ಹೆಸರು ನೆಹರು. ಮೋತೀಲಾಲರು ಹೆಸರಾದ ವಕೀಲರಾಗಿದ್ದರು; ಬಹಳ ಸಿರಿವಂತರಿದ್ದರು. ತಂದೆಯಂತೆ ಜವಾಹರರೂ ಹೆಸರಾದ ವಕೀಲರಾದರು.

ಅಷ್ಟರಲ್ಲಿ "ಗಾಂಧೀಚಳವಳಿಯು" ಆರಂಭವಾಯಿತು. ಜವಾಹರರು ವಕೀಲಿ ಬಿಟ್ಟು, ಚಳವಳಿ ಸೇರಿದರು. ಆದ್ದರಿಂದ ಆಗಿನ ಸರಕಾರದವರು ಅವರನ್ನು ಸೆರೆಮನೆಯಲ್ಲಿಟ್ಟರು. ದೇಶದ ಸಲುವಾಗಿ ಹಲವು ಬಾರಿ ಅವರು ಸೆರೆಮನೆಗೆ ಹೋಗಬೇಕಾಯಿತು; ಬಹಳ ಕಷ್ಟವನ್ನು ಸಹಿಸಬೇಕಾಯಿತು.

ಅವರು ಸೆರೆಮನೆಯಲ್ಲಿದ್ದಾಗ ಪುಸ್ತಕಗಳನ್ನು ಓದುತ್ತ ಒಬ್ಬರೇ ಕಾಲಕಳೆಯುತ್ತಿದ್ದರು. ಬೇಸರಿಕೆ ಬಂದಾಗ ಸಣ್ಣ ಪ್ರಾಣಿಗಳ ಕೂಡ ಹಾಗೂ ಪಕ್ಷಿಗಳ ಕೂಡ ಆಟವಾಡುವರು. ಹೀಗೆ ಅಲ್ಲಿಯ ಪ್ರಾಣಿಗಳೂ ಪಕ್ಷಿಗಳೂ ಅವರಿಗೆ ಗೆಳೆಯರಾದವು. ಒಮ್ಮೆ ಒಂದು ಗಿಳಿ ಅವರ ಕೋಣೆಯ ಹತ್ತಿರ ಬಂದು ಕುಳಿತಿತು. ಅದಕ್ಕೆ ಹಣ್ಣು ಕೊಟ್ಟರು. ಅದು ದಿನಾಲು ಬರಹತ್ತಿತು. ಗಿಳಿ ಇದ್ದ ಗಿಡದ ಹೊದರಿನಲ್ಲಿ ಒಂದು ಇಣಚಿಯೂ ಇತ್ತು. ಅದಕ್ಕೂ ಅವರು ತಿನ್ನಲಿಕ್ಕೆ ಕೊಡುತ್ತಿದ್ದರು. ಅದೂ ಅವರ ಹತ್ತಿರ ಬರಹತ್ತಿತು. ಅದನ್ನೂ ಅವರು ಪ್ರೀತಿಸುತ್ತಿದ್ದರು.

ಒಮ್ಮೆ ನಡುರಾತ್ರಿಯಲ್ಲಿ ಅವರ ಕೋಣೆಯ ಹೊರಗೆ ಮೂರು ನಾಯಿಕುನ್ನಿಗಳು ಕುಂಯಿಗುಟ್ಟಹತ್ತಿದವು. ಅವು ಚಳಿಯಿಂದ ನಡುಗುತ್ತಿದ್ದವು. ಆಗ ಜವಾಹರರಿಗೆ ಎಚ್ಚರಿಕೆಯಾಯಿತು. ಹೊರಗೆ ಹೋಗಿ ಮರಿಗಳನ್ನು ನೋಡಿ, ಕೈಯಲ್ಲಿ ಎತ್ತಿಕೊಂಡು ಬಂದರು; ಅವುಗಳನ್ನು ತಮ್ಮ ಮೆತ್ತನ್ನ ಹಾಸಿಗೆಯ ಮೇಲೆ ಮಲಗಿಸಿ, ತಮ್ಮ



ಶಾಲನ್ನು ಹೊಚ್ಚಿ ಚಪ್ಪರಿಸಿದರು. ದಿನಾಲು ತಮ್ಮ ಪಾಲಿನ ಊಟದಲ್ಲಿ ಸ್ವಲ್ಪ ಭಾಗವನ್ನು ಅವುಗಳಿಗೆ ಕೊಡುತ್ತಿದ್ದರು. ಅವುಗಳಲ್ಲಿ ಒಂದರ ಸ್ವಭಾವ ಚಂಚಲ; ಆದ್ದರಿಂದ ಅದನ್ನು "ಚಂಚಲ" ಎಂದು ಕರೆದರು. ಇನ್ನೊಂದು ಯಾವಾಗಲೂ ನಗೆಮುಖದಿಂದ ಇರುತ್ತಿತ್ತು; ಆದ್ದರಿಂದ ಅದಕ್ಕೆ "ಆನಂದ" ಎಂದು ಹೆಸರಿಟ್ಟರು. ಮೂರನೆಯದು ಸ್ವಲ್ಪ ಕಿಡಿಗೇಡಿ ಇತ್ತು, ಅದನ್ನು ಅವರು "ತಿಳಿಗೇಡಿ" ಎಂದು ಕರೆಯಹತ್ತಿದರು. ಸೆರೆಮನೆಯಲ್ಲಿ ಪುಸ್ತಕಗಳನ್ನು ಓದುತ್ತ, ಬೇಸರ ಬಂದಾಗ ಪ್ರಾಣಿಗಳ ಕೂಡ ಆಟವಾಡುತ್ತ ಜವಾಹರರು ಕಾಲಕಳೆಯಹತ್ತಿದರು.

ಕೆಲವು ದಿವಸಗಳ ತರುವಾಯ ಸೆರೆಮನೆಯಿಂದ ಅವರ ಬಿಡುಗಡೆ ಆಯಿತು. ಜವಾಹರರಿಗೆ ಗಿಳಿ, ಇಣಚಿ, ನಾಯಿಕುನ್ನಿಗಳನ್ನು ಬಿಟ್ಟು ಹೋಗುವಾಗ ಚಡಪಡಿಕೆಯಾಯಿತು. ಗಾಡಿಯೇನೋ ಅವರನ್ನು ಕೂಡ್ರಿಸಿಕೊಂಡು ಮುಂದೆ ಸಾಗಿತು; ಆದರೆ ಜವಾಹರರ ಕಣ್ಣುಗಳು ಮಾತ್ರ ಅವುಗಳ ಮೇಲೆಯೇ ಇದ್ದವು

ಇಂತಹ ದಯಾಳು ಜವಾಹರರು ಇಂದು ನಮ್ಮ ದೇಶದ ಮುಂದಾಳಾಗಿರುವದು ನಮ್ಮ ಸುದೈವ !

ಅಭ್ಯಸನಗಳು:—

೧. ಜವಾಹರರು ಸೆರೆಮನೆಗೆ ಯಾಕೆ ಹೋದರು ?
೨. ಸೆರೆಮನೆಯಲ್ಲಿ ಅವರಿಗೆ ಯಾರು ಗೆಳೆಯರಾದರು ?
೩. ಜವಾಹರರು ನಾಯಿಕುನ್ನಿಗಳನ್ನು ಏನೆಂದು ಕರೆದರು ? ಯಾಕೆ ?
೪. ಸೆರೆಮನೆಯಿಂದ ಹೋಗುವಾಗ ಜವಾಹರರಿಗೆ ಏಕೆ ಚಡಪಡಿಕೆಯಾಯಿತು ?
೫. ಕೆಳಗಿನ ವಾಕ್ಯಗಳನ್ನು ಪೂರ್ಣಮಾಡಿರಿ :-
   ಅ) ದೇಶದ ಸಲುವಾಗಿ ಹಲವು ಬಾರಿ ——— ಹೋಗಬೇಕಾಯಿತು.
   ಆ) ಮೂರನೆಯದು ಸ್ವಲ್ಪ ——— ಇತ್ತು.
   ಇ) ಗಾಡಿಯೇನೋ ಅವರನ್ನು ——— ಮುಂದೆ ಸಾಗಿತು.
೬. ಕೆಳಗಿನ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯ ಬರೆಯಿರಿ: ಹೊದರು, ಸ್ವಭಾವ, ನಡುರಾತ್ರಿ, ಚಡಪಡಿಕೆ.

## ೨. ಸ್ವಚ್ಛತೆ

ಗಣಗಣ ಗಂಟೆ ಬಾರಿಸಿತು. ಮಕ್ಕಳು ಲಗುಬಗೆಯಿಂದ ಓಡತೊಡಗಿದರು. ಕೆಲವರು ಪಾಟಿಯ ಚೀಲವನ್ನು ಬೆನ್ನಮೇಲೆ ಹಾಕಿದ್ದರು. ಕೆಲವರು ಕೈಯಲ್ಲಿ ಹಿಡಿದಿದ್ದರು. ಇನ್ನೊಮ್ಮೆ ಗಂಟೆಯಾಯಿತು. ವರ್ಗದ ಕೋಣೆಗಳಿಂದ ಮಕ್ಕಳು ಶಿಸ್ತಿನಿಂದ ಬರಹತ್ತಿದರು. ಸಾಲುಸಾಲಾಗಿ ಬಯಲಲ್ಲಿ ನಿಂತರು. ಸ್ವಚ್ಛತೆಯ ಮಂತ್ರಿಗಳು ತಮ್ಮ ವರ್ಗದ ಮಕ್ಕಳ ಸ್ವಚ್ಛತಾಪರೀಕ್ಷೆ ನಡಿಸಿದರು.

ಎರಡನೆಯ ಇಯತ್ತೆಯ ಸ್ವಚ್ಛತಾಮಂತ್ರಿಯು ನಿಜಗುಣಿ. ಅವನು ಬಲು ಜಾಣ. "ಹನುಮ ಹಲ್ಲು ತಿಕ್ಕಿಲ್ಲ; ಕಮಲೆ ತಲೆಯನ್ನು ಹಿಕ್ಕಿಕೊಂಡಿಲ್ಲ ಅನಂತನ ಅಂಗಿ ಮಾಸಿದೆ" ಎಂದು ಅನ್ನುತ್ತ ಅವರೆಲ್ಲರನ್ನು ಮುಂದೆ ನಿಲ್ಲಿಸಿದನು. ಗುರುಗಳೂ ಅವರನ್ನು ನೋಡಿದರು. "ಅನಂತಾ, ನೀನು ಮನೆಗೆಹೋಗು. ಒಗೆದ ಅಂಗಿಯನ್ನು ಹಾಕಿಕೊಂಡು ಬಾ. ಉಳಿದವರು ಇಲ್ಲಿಯೇ ಸ್ವಚ್ಛಮಾಡಿಕೊಳ್ಳಲಿ"



ಎಂದು ಹೇಳಿದರು. ಕರಿಬೂದಿ, ನೀರು, ತಂಬಿಗೆ, ವಸ್ತ್ರ ಮುಂತಾದ ಸಾಮಾನುಗಳನ್ನು ನಿಜಗುಣಿಯು ಸಾಲೆಯ ಹೊರಗೆ ಮೂಲೆಯಲ್ಲಿ ಇಟ್ಟಿದ್ದನು; ಹಣಿಗೆ, ಕನ್ನಡಿಗಳನ್ನು ಕೋಣೆಯಲ್ಲಿ ಇಟ್ಟಿದ್ದನು. ಸ್ವಚ್ಛವಿಲ್ಲದ ಮಕ್ಕಳನ್ನು ಗುರುಗಳು ಅಲ್ಲಿಗೆ ಕಳಿಸಿದರು. ಅವರು ಸ್ವಚ್ಛಮಾಡಿಕೊಂಡು ಐದಾರು ನಿಮಿಷಗಳಲ್ಲಿ ಮರಳಿ ಬಂದರು. ಪ್ರಾರ್ಥನೆ ಮತ್ತು ಕವಾಯತು ಮುಗಿದವು. ಎಲ್ಲರೂ ಸಾಲಾಗಿ ತಮ್ಮ ತಮ್ಮ ವರ್ಗದ ಕೋಣೆಗಳಿಗೆ ಹೋದರು.

ನಿಜಗುಣಿ:- ಗೆಳೆಯರೇ, ಈ ಹೊತ್ತು ಬಹಳ ಹುಡುಗರ ಹಲ್ಲು ಹೊಲಸಾಗಿವೆ. ಕೆಲವು ಹುಡಿಗೆಯರ ಕೂದಲೂ ಓರಣವಾಗಿಲ್ಲ. ಹೀಗೆ ಏಕೆ ಮಾಡಿದಿರಿ ?

ಶ್ಯಾಮು:- ಅಣ್ಣಾ, ನಿನ್ನೆ ರಾತ್ರಿ ಹನುಮಪ್ಪನ ಗುಡಿಯ ಮುಂದೆ ಲಾವಣಿ ಪದಗಳನ್ನು ಹಚ್ಚಿದ್ದರು. ನಾವೆಲ್ಲರೂ ಕೇಳಲಿಕ್ಕೆ ಹೋಗಿದ್ದೆವು; ತಡವಾಗಿ ಮಲಗಿದೆವು. ಬೆಳಗಿನಲ್ಲಿ ಏಳುವದಕ್ಕೂ

ಕೆಲವರಿಗೆ ತಡವಾಗಿರಬಹುದು. ಅವರು ಅವಸರದಿಂದ ಹಾಗೆಯೇ ಬಂದಿರಬಹುದು.

ನಿಜಗುಣಿ:- ಹೌದು. ನಾನೂ ಅಲ್ಲಿಗೆ ಹೋಗಿದ್ದೆ. ನೀನೂ ಅಲ್ಲಿಗೆ ಬಂದಿದ್ದೆ. ಆದರೆ ನಾನೂ ನೀನೂ ಸ್ವಚ್ಛವಾಗಿ ಬಂದಿರುವೆವು. ನಸುಕಿನಲ್ಲಿ ಎದ್ದರೆ ಎಲ್ಲವೂ ಒಳಿತಾಗುವುದು "ಬೇಗ ಮಲಗು, ಬೇಗ ಏಳು; ಅಂದರೆ ಆರೋಗ್ಯವಂತನಾಗುವೆ, ಸಿರಿವಂತನಾಗುವೆ ಮತ್ತು ಬುದ್ಧಿವಂತನಾಗುವೆ" ಎಂದು ಹಿರಿಯರು ಹೇಳುವರು.

ಅಭ್ಯಸನಗಳು:-

೧. ಸ್ವಚ್ಛತಾಪರೀಕ್ಷೆಯನ್ನು ಯಾರು ಮಾಡಿದರು ?

೨. ಸಾಲೆಯ ಹೊರಗೆ ನಿಜಗುಣಿಯು ಯಾವ ಯಾವ ಸಾಮಾನುಗಳನ್ನು ಇಟ್ಟಿದ್ದನು ?

೩. ಲಾವಣಿ ಪದಗಳನ್ನು ಎಲ್ಲಿ ಹಚ್ಚಿದ್ದರು ?

೪. ನಸುಕಿನಲ್ಲಿ ಯಾಕೆ ಏಳಬೇಕು ?

೫. ಮಾತುಗಳನ್ನು ಪೂರ್ಣಮಾಡಿರಿ :

ಅ) ಕಮಲೆ ತಲೆ ———; ಅನಂತನ ——— ಮಾಸಿದೆ.

ಆ) ಈ ಹೊತ್ತು ಬಹಳ ——— ——— ಹೊಲಸಾಗಿದೆ.

ಇ) ಬೇಗ ———, ಬೇಗ ——— ———; ಅಂದರೆ ———, ——— ಮತ್ತು ——— .

೬. ಕೆಳಗಿನ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯ ಬರೆಯಿರಿ:

ಮಾಸು, ಜಳಜಳ, ಒಳಿತಾಗು, ಹಿರಿಯರು.

೭. 'ನೀನು ಕೆಲಸವನ್ನು' ಎಂದು ಹೇಳಿದರೆ ಮಾತು ಮುಗಿಯುವದಿಲ್ಲ; ಆದರೆ 'ನೀನು ಕೆಲಸವನ್ನು ಮಾಡು' ಎಂದು ಹೇಳಿದರೆ ಮಾತು ಮುಗಿಯುತ್ತದೆ. ಪೂರ್ಣವಾದ ಮಾತಿಗೆ "ವಾಕ್ಯ" ಅನ್ನುವರು.

೮. ಕೆಳಗಿನವುಗಳಲ್ಲಿ ವಾಕ್ಯಗಳು ಯಾವವು ?

(೧) ಸಂಗನು ಮನೆಗೆ (೨) ಮಲ್ಲನು ಪುಸ್ತಕವನ್ನು ಓದಿದನು.
(೩) ಸೀತೆಯು ನಾಯಿಯನ್ನು (೪) ಕಲ್ಲನು ಕಡಿದನು.
(೫) ರಾಮನು ಮನೆಯಿಂದ (೬) ಭೀಮನು ಓಡಿದನು.

## ೩. ಠಕ್ಕ ನರಿ



ಬ್ರಹ್ಮಾರಣ್ಯದಲ್ಲಿ "ಕರ್ಪೂರ ತಿಲಕ" ಎಂಬ ಹೆಸರಿನ ಒಂದು ಆನೆ ಇತ್ತು. ಒಂದು ದಿನ ನರಿಗಳೆಲ್ಲ ಕೂಡಿ ಹೀಗೆ ಆಲೋಚಿಸಿದವು:- ಯಾವದಾದರೊಂದು ಉಪಾಯದಿಂದ ಈ ಆನೆಯನ್ನು ಕೊಂದರೆ ಅದರ ಮಾಂಸವನ್ನು ತಿಂದು ನಾವು ನಾಲ್ಕು ತಿಂಗಳು ಬದುಕುವೆವು. ಏನಾದರೂ ಹಂಚಿಕೆಮಾಡಿ ಈ ಆನೆಯನ್ನು ಕೊಲ್ಲಬೇಕು." ಅವುಗಳಲ್ಲಿ ಒಂದು ನರಿಯು ಮುಂದೆ ಬಂದು ಹೇಳಿತು:– "ನನ್ನ ಬುದ್ಧಿಯ ಬಲದಿಂದ ಈ ಆನೆಯನ್ನು ಕೊಲ್ಲುವ ಕೆಲಸವನ್ನು ನಾನು ಮಾಡುವೆನು."

ಆ ಠಕ್ಕ ನರಿಯು ಆನೆಯ ಸಮೀಪಕ್ಕೆ ಹೋಗಿ, ಸಾಷ್ಟಾಂಗನಮಸ್ಕಾರ ಹಾಕಿತು. ಆನೆ:–"ನೀನು ಯಾರು? ಎಲ್ಲಿಂದ ಬಂದಿರುವೆ?" ನರಿ:–"ನಾನು ನರಿ. ಇಲ್ಲಿರುವ ಎಲ್ಲ ಪ್ರಾಣಿಗಳು ಕೂಡಿ ನನ್ನನ್ನು ತಮ್ಮ ಕಡೆಗೆ ಕಳುಹಿರುವವು. ರಾಜನಿಲ್ಲದೆ ಇಲ್ಲಿ ನಾವು ಇರುವದು ಶಕ್ಯವಿಲ್ಲ. ರಾಜನಲ್ಲಿ ಇರತಕ್ಕ ಎಲ್ಲ ಗುಣಗಳು ತಮ್ಮಲ್ಲಿ ಅವೆ. ಆದ್ದರಿಂದ ತಮ್ಮನ್ನು ಈ ಅಡವಿಗೆ ರಾಜನನ್ನಾಗಿ

ಮಾಡಿ, ತಮಗೆ ರಾಜ್ಯಾಭಿಷೇಕಮಾಡಬೇಕೆಂದು ನಾವೆಲ್ಲರೂ ನಿರ್ಣಯಿಸಿರುವೆವು. ಅಭಿಷೇಕ ಸಮಯವು ತೀರ ಸಮೀಪಿಸಿದೆ. ಸುಮುಹೂರ್ತದಲ್ಲಿ ತಮ್ಮ ಅಭಿಷೇಕವನ್ನು ನೆರವೇರಿಸಬೇಕಾಗಿದೆ. ಆದಕ್ಕಾಗಿ ಕೂಡಲೆ ತಾವು ಹೊರಡಬೇಕು'' ಎಂದು ಹೇಳಿ ನರಿಯು ಎದ್ದು ನಡೆಯಿತು.

ಕರ್ಪೂರತಿಲಕವು ರಾಜ್ಯದ ಆಶೆಯಿಂದ ನರಿಯನ್ನು ಹಿಂಬಾಲಿಸಿ ಅವಸರದಿಂದ ನಡೆಯಿತು. ನರಿಯು ಒಂದು ಕೆಸರು ತುಂಬಿದ ಕೆರೆಯೊಳಗೆ ಅದನ್ನು ಕರೆದುಕೊಂಡು ಹೋಯಿತು. ಆನೆಯು ಕೆಸರೊಳಗೆ ಸಿಕ್ಕಿಕೊಂಡಿತು. ಅಲ್ಲಿಂದ ಹೊರಗೆ ಬರಲು ಅದಕ್ಕೆ ಸಾಧ್ಯವಾಗಲಿಲ್ಲ. ಆಗ ಆನೆ:–"ಗೆಳೆಯಾ, ಇನ್ನೇನು ಮಾಡಬೇಕು? ಕೆಸರಿನೊಳಗೆ ಸಿಕ್ಕಿಕೊಂಡಿರುವೆನು." ನರಿ:-"ದೇವಾ, ನನ್ನ ಬಾಲವನ್ನು ಹಿಡಿದುಕೊಂಡು ಮೇಲೆ ಬರಬೇಕು. ನನ್ನ ಮಾತಿನ ಮೇಲೆ ತಾವು ವಿಶ್ವಾಸವಿಟ್ಟಿರುವಿರಿ'' ಎಂದು ನಕ್ಕು ಕುಣಿದಾಡಹತ್ತಿತು.

ಅಭ್ಯಸನಗಳು:–

೧. ನರಿಗಳು ಕೂಡಿ ಏನು ಆಲೋಚಿಸಿದವು?
೨. ಒಂದು ನರಿಯು ಆನೆಗೆ ಏನು ಹೇಳಿತು?
೩. ನರಿಯು ಏನು ಹಂಚಿಕೆ ಮಾಡಿತು?
೪. ಆನೆಯು ಎಲ್ಲಿ ಸಿಕ್ಕಿಕೊಂಡಿತು?
೫. ಬಿಟ್ಟ ಶಬ್ದಗಳನ್ನು ತುಂಬಿ, ವಾಕ್ಯಗಳನ್ನು ಪೂರ್ಣಮಾಡಿರಿ:
   ಅ) ——— ಇಲ್ಲಿ ನಾವು ಇರುವದು ಶಕ್ಯವಿಲ್ಲ.
   ಆ) ———ಸಮಯ———ಸಮೀಪಿಸಿದೆ.
   ಇ) ———ರಾಜ್ಯದ ಆಶೆಯಿಂದ———ಹಿಂಬಾಲಿಸಿ——— ನಡೆಯಿತು.
   ಈ) ದೇವಾ, ನನ್ನ———ಹಿಡಿದುಕೊಂಡು———ಬರಬೇಕು.
೬. ಕೆಳಗಿನ ಶಬ್ದಗಳ ಅರ್ಥ ಹೇಳಿರಿ:
   ಸಾಧಿಸು, ಶಕ್ಯ, ಸಾಷ್ಟಾಂಗ, ರಾಜ್ಯಾಭಿಷೇಕ, ಸುಮುಹೂರ್ತ, ವಿಶ್ವಾಸ.
೭. ಕೆಳಗಿನ ಶಬ್ದಗಳ ಅರ್ಥ ಹೊಂದಿಸಿರಿ:

| | |
|---|---|
| ಬ.ಹಾ. | ಆನೆಯ ಹೆಸರು |
| ಕರ್ಪೂರತಿಲಕ | ಅಡವಿಯ ಹೆಸರು |

## ೪. ಜಾಣ ಗಿಳಿ



ಅದು ರಾಮನ ಗಿಳಿ, ವಿಠ್ಠಲ. ಅದರ ಮೇಲೆ ರಾಮನ ಮಮತೆ ಬಹಳ. ಆಗಾಗ ರಾಮನು ಪೇರಲ, ಬಾಳೆ, ದಾಳಿಂಬ ಹಣ್ಣುಗಳನ್ನು ಅದಕ್ಕೆ ತಿನ್ನಲಿಕ್ಕೆ ಕೊಡುವನು. ನೀರು ಕುಡಿಸುವನು. ಗಿಳಿಯ ಪಂಜರದಲ್ಲಿ ಒಂದು ಜೋಕಾಲಿ ಉಂಟು. ಒಮ್ಮೊಮ್ಮೆ ಗಿಳಿಯು ಅದಕ್ಕೆ ಜೋತುಬೀಳುವದು. ಪಂಜರದಲ್ಲಿ ಒಂದು ಸಣ್ಣ ಗಂಟೆಯಿದೆ. ಗಿಳಿಯು 'ಟಿಂಗ್ ಟಿಂಗ್' ಎಂದು ಅದನ್ನು ಬಾರಿಸುವದು. ರಾಮನು ಗಿಳಿಗೆ ಮಾತು ಕಲಿಸಿದ್ದನು. ರಾಮನನ್ನು ಕಂಡಕೂಡಲೆ ಅದು 'ರಾಮ ರಾಮ' ಎಂದು ಅನ್ನುತ್ತಿತ್ತು. ಪಂಜರದಲ್ಲಿಯೇ ಓಡಾಡುತ್ತಿತ್ತು; ಆದರೆ ಅದು ಯಾವಾಗ ಹೊರಗೆ ಹಾರಿ ಹೋದೇನೆಂದು ಚಿಂತಿಸುತ್ತಿತ್ತು.

ರಂಗನು ರಾಮನ ತಮ್ಮ. ಚೆಂಡು ಪುಟಸುತ್ತ ಗಿಳಿಯ ಪಂಜರದ ಹತ್ತಿರ ಬಂದನು. ಗಿಳಿಯ ಸಂಗಡ ಮಾತಾಡತೊಡಗಿದನು.

ರಂಗ:–ಗಿಳಿಯೇ, ಹೊರಗೆ ಬಾ; ಆಡೋಣ; ಚೆಂಡು ಕೊಡುವೆ.

ಗಿಳಿ:–ತುಸು ತಡೆ. ನಾನು ಹಣ್ಣು ತಿಂದು ಬರುತ್ತೇನೆ.

ರಂಗ:–ಆಗಲಿ, ನೀನು ಬರುವ ತನಕ ನಾನು ಇಲ್ಲಿಯೇ ಚೆಂಡು ಪುಟಸುತ್ತೇನೆ.

ಗಿಳಿ:– ಅಣ್ಣಾ, ನಾನು ಹೊರಗ ಹ್ಯಾಗೆ ಬರಲಿ? ನನ್ನ ಪಂಜರದ ಬಾಗಿಲು ಮುಚ್ಚಿದೆ. ಅದನ್ನು ನೀನು ತೆರೆ; ಅಂದರೆ ನಾನು ಹೊರಗೆ ಬರುವೆ.

ರಂಗ:– ಹೀಗೋ? ನಿಲ್ಲು ನಾನು ಬಾಗಿಲವನ್ನು ತೆರೆಯುವೆ.

ಗಿಳಿ:– ಇದು ನೋಡು! ಹೊರಗೆ ಬಂದೆ ನೀನು ಚೆಂಡು ಪುಟಿಸು. ನಾನೂ ಪುಟಿಸುವೆ. ಇಬ್ಬರೂ ಆಡೋಣ.

ರಂಗ:– ಓಹೋ! ಚೆಂಡು ಬಹಳ ಮೇಲೆ ಹಾರಿತು!

ಗಿಳಿ:– ತಡೆ, ನಾನು ಹಾರಿ ಚೆಂಡನ್ನು ತರುವೆ.

ಗಿಳಿ ಭುರ್ರನೆ ಮೇಲೆ ಹಾರಿ, ಮನೆಯ ಹೊರಗೆ ಹೋಯಿತು.

ಅಭ್ಯಾಸನಗಳು:–

೧. ಗಿಳಿಯು ಪಂಜರದಲ್ಲಿ ಏನೇನು ಮಾಡುವದು?
೨. ಗಿಳಿಯು ಏನು ಅನ್ನುತ್ತಿತ್ತು?
೩. ರಂಗನು ಗಿಳಿಗೆ ಏನೇನು ಹೇಳಿದನು?
೪. ಗಿಳಿಯು ಪಂಜರದಿಂದ ಹೇಗೆ ಪಾರಾಯಿತು?
೫. ಬಿಟ್ಟ ಶಬ್ದಗಳನ್ನು ತುಂಬಿರಿ:
   ಅ) ಆ ಗಿಳಿಯ ಮೇಲೆ ರಾಮನ ——— ಬಹಳ.
   ಆ) ಗಿಳಿಯು ——— ಎಂದು ಅದನ್ನು ಬಾರಿಸುವದು.
   ಇ) ನೀನು ಚೆಂಡು ——— .
   ಈ) ಗಿಳಿಯು ——— ಹಾರಿ ಮನೆಯ ಹೊರಗೆ ——— .

## ೫. ಪಾತರಗಿತ್ತಿ ಪಕ್ಕ

ಬ್ಯಾಂಡ ಧಾಟಿ: ಏಕತಾಳ

ಪಾತರಗಿತ್ತಿ ಪಕ್ಕಾ
ನೋಡಿದೇನ ಅಕ್ಕಾ
ಹಸರು ಹಚ್ಚಿ ಚುಚ್ಚಿ
ಮೇಲಕರಿಷಿಣ ಹಚ್ಚಿ ॥ ೧ ॥



ಹೊನ್ನ ಚಿಕ್ಕಿ ಚಿಕ್ಕಿ
ಇಟ್ಟು ಬೆಳ್ಳೀ ಅಕ್ಕಿ
ಸುತ್ತು ಕುಂಕುಮದೆಳಿ
ಎಳೆದು ಕಾಡಿಗೆ ಸುಳಿ ॥ ೧ ॥

ಏನು ಬಣ್ಣಾ ಬಣ್ಣಾ
ನಡುವೆ ನವಿಲುಗಣ್ಣಾ !
ರೇಶಿಮೆ ಪಕ್ಕ ನಯ
ಮುಟ್ಟಲಾರೆ ಭಯ ! ॥ ೨ ॥

ಹೂವಿನ ಪಕಳೀಗಿಂತ
ತಿಳಿವೂ ತಿಳಿವೂ ಅಂತ
ಹೂವಿಗೆ ಹೋಗಿ ತಾವ
ಗಲ್ಲಾ ತಿವೀತಾವ

— ದ. ರಾ. ಬೇಂದ್ರೆ.

ಅಭ್ಯಾಸಗಳು:—

೧. ಕವಿತೆಯಲ್ಲಿ ಹೇಳಿದಂತೆ ಪಾತರಗಿತ್ತಿಯ ಪಕ್ಕವನ್ನು ವರ್ಣಿಸಿರಿ.
೨. ಪಾತರಗಿತ್ತಿಯ ಪಕ್ಕವನ್ನು ಮುಟ್ಟಲಿಕ್ಕೆ ಯಾಕೆ ಅಂಜಿಕೆಯಾಗುವದು ?
೩. ಪಾತರಗಿತ್ತಿಗಳು ಹೂವಿಗೆ ಏನು ಮಾಡುತ್ತಿದ್ದವು ?

# ೬. ಇಣಚಿ



ಈ ಚಿತ್ರದಲ್ಲಿ ಇರುವ ಪ್ರಾಣಿ ಯಾವದು? ನಿಮಗೆ ಗೊತ್ತಿದೆಯೇ? ಅದು ಇಣಚಿ. ಗಿಡದ ಟೊಂಗೆಯ ಮೇಲೆ ಕುಳಿತಿದೆ. ಕಾಯಿಗಳನ್ನು ತಿನ್ನುತ್ತಿದೆ. ಅದು ಎಂಥ ಸುಂದರವಾದ ಪ್ರಾಣಿ! ಅದರ ಮೈಮೇಲೆ ಮೃದುವಾದ ತುಪ್ಪಳುಗಳು ಅವೆ. ಆದರಿಂದ ಅದು ಒಂದು ಚೆಂದವಾದ ಅಂಗಿಯನ್ನು ತೊಟ್ಟುಕೊಂಡಂತೆ ಕಾಣುತ್ತದೆ. ಇದಕ್ಕೆ ದಟ್ಟವಾದ ಕೂದಲುಗಳುಳ್ಳ ಒಂದು ಉದ್ದವಾದ ಬಾಲವು ಅದೆ.

ಇಣಚಿ ಸಣ್ಣ ಪ್ರಾಣಿ. ಬಲು ಸುಂದರ. ಅದು ಗಿಡದ ಟೊಂಗೆಯ ಮೇಲೆ ಓಡಾಡುವದು. ಗಿಡದ ಹೊದರಿನಲ್ಲಿ ಇರುವದು. ಮನೆಯ ಮಾಳಿಗೆಯ ಮೇಲೆಯೂ ಇರುವದು.

ಇಣಚಿ ಬಲು ಚಪಲವಾದ ಪ್ರಾಣಿ. ಆಹಾರವನ್ನು ಹುಡುಕಲು ಟೊಂಗೆಯಿಂದ ಟೊಂಗೆಗೆ ಜಿಗಿಯುವದನ್ನು ಕಂಡರೆ, ನಮಗೆ ಆಶ್ಚರ್ಯವೆನಿಸುತ್ತದೆ. ಇಲಿಯಂತೆ ಅದಕ್ಕೆ ಹದನಾದ ಹಲ್ಲುಗಳು ಇರುವವು. ಅದು ಕಾಯಿ, ಬೀಜ ಇವುಗಳನ್ನು ತಿಂದು ಬದಕುತ್ತದೆ. ಅದು ಬಹಳ ಅಂಜುಬುರುಕ ಪ್ರಾಣಿ. ಅದನ್ನು ಸುಲಭವಾಗಿ ಅಂಜಿಸಬಹುದು. ಅದು ಅಂಜಿದಾಗ ಚೀರುವದು.

ಅವುಗಳಿಂದ ಅದರ ಶೋಭೆ ಹೆಚ್ಚಾಗಿದೆ. ಈ ಪಟ್ಟೆಗಳು ಇದಕ್ಕೆ ಹೇಗೆ ಉಂಟಾದವೆಂಬುದಕ್ಕೆ ಒಂದು ಕಥೆ ಹೇಳುವರು.

ಶ್ರೀರಾಮನು ತನ್ನ ವಾನರಸೇನೆಯನ್ನು ಲಂಕೆಗೆ ಒಯ್ಯಲು ಸಮುದ್ರಕ್ಕೆ ಸೇತುವೆಯನ್ನು ಕಟ್ಟಬೇಕಾಯಿತು. ಆಗ ಅವನಿಗೆ ಎಲ್ಲ ಪ್ರಾಣಿಗಳು ಸಹಾಯಮಾಡಿದವು. ತೀರ ಸಣ್ಣ ಪ್ರಾಣಿಯಾದ ಇಣಚಿಯೂ ತನ್ನ ಸೇವೆಯನ್ನು ಸಲ್ಲಿಸಿತು. ಅದು ಸಮುದ್ರದಲ್ಲಿ ಮುಳುಗಿ ಮೈಯನ್ನು ಹಸಿ ಮಾಡಿಕೊಂಡು ಮಳಲಿನಲ್ಲಿ ಉರುಳಾಡುತ್ತಿತ್ತು. ಮೈಗೆ ಹತ್ತಿದ ಮಳಲಿನ ಕಣಗಳನ್ನು ಸೇತುವೆ ಕಟ್ಟುವ ಸ್ಥಳದಲ್ಲಿ ಉದುರಿಸುತ್ತಿತ್ತು.



ಈ ಪ್ರಕಾರ ಸೇತುವೆ ಕಟ್ಟುವ ಕೆಲಸದಲ್ಲಿ ನೆರವಾಗುತ್ತಿದ್ದ ಇಣಚಿಯನ್ನು ಶ್ರೀರಾಮನು ನೋಡಿದನು; ಸಂತೋಷಪಟ್ಟನು. ಅದರ ಮೈಮೇಲೆ ಕೈಯಾಡಿಸಿದನು. ಆತನ ಕೈಬೆರಳುಗಳು ಅದರ ಮೈಮೇಲೆ ಮೂಡಿದವು. ಅವೇ ಈ ಮೂರು ಪಟ್ಟೆಗಳು!

ಅಭ್ಯಸನಗಳು:—

೧. ಇಣಚಿ ಎಲ್ಲಿ ವಾಸಿಸುವದು ?
೨. ಅದು ಏನು ತಿಂದು ಬದುಕುವದು ?
೩. ಇಣಚಿಯು ಶ್ರೀರಾಮನಿಗೆ ಹೇಗೆ ಸಹಾಯಮಾಡಿತು ?
೪. ಇಣಚಿಯ ಡುಬ್ಬದ ಮೇಲೆ ಮೂರು ಪಟ್ಟೆಗಳು ಹೇಗೆ ಉಂಟಾದವು ?
೫. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ:
   ಅ) ಅದರ ಮೈಮೇ          -ತುಪ್ಪಳುಗಳು ಅವೆ.
   ಆ) ಇಣಚಿ-          -ಪ್ರಾಣಿ.
   ಇ)          -ಅದಕ್ಕೆ ಹದನಾದ ಹಲ್ಲುಗಳು
೬. ಇಣಚಿಯ ಬಗ್ಗೆ ನಿಮಗೆ ಗೊತ್ತಿದ್ದುದನ್ನು ಬರೆಯಿರಿ.

# ೭. ನರಿಯ ಜೀನತನ



'ಕಲ್ಯಾಣಕಟಕ' ಎಂಬ ಊರಲ್ಲಿ ಒಬ್ಬ ಬೇಡನಿದ್ದನು. ಆತನ ಹೆಸರು ಭೈರವ. ಒಮ್ಮೆ ಬೇಟೆಗಾಗಿ ವಿಂಧ್ಯಪರ್ವತದಲ್ಲಿ ಅಲೆದಾಡುತ್ತಿದ್ದನು. ಆಗ ಅವನು ಓಡುತ್ತಿರುವ ಚಿಗರೆಗಳನ್ನು ಕಂಡನು. ಆ ಚಿಗರೆಯ ಹಿಂಡನ್ನು ಬೆನ್ನಟ್ಟಿದನು. ಅವನು ಒಂದು ಚಿಗರೆಯನ್ನು ಬಾಣದಿಂದ ಹೊಡೆದು ಕೊಂದನು. ಅದನ್ನು ಹೊತ್ತುಕೊಂಡು ಮುಂದೆ ನಡೆದನು.

ದಾರಿಯಲ್ಲಿ ಆ ಬೇಡನು ಒಂದು ದೊಡ್ಡ ಕಾಡಹಂದಿಯನ್ನು ಕಂಡನು. ಸತ್ತ ಚಿಗರೆಯನ್ನು ಕೆಳಗೆ ಇಟ್ಟನು; ಆ ಹಂದಿಗೆ ಬಾಣ ಬಿಟ್ಟನು. ಹಂದಿಯು ಘೋರ ಗರ್ಜನೆಮಾಡುತ್ತ ಓಡಿಬಂದಿತು. ಆತನನ್ನು ಕೋರೆದಾಡೆಗಳಿಂದ ಇರಿಯಿತು. ಈ ಹೊಡೆತಕ್ಕೆ ಆತನು ಭೂಮಿಗೆ ಬಿದ್ದನು. "ಹಾಯ್ ಹಾಯ್" ಎಂದು ನರಳುತ್ತ ಮರಣಹೊಂದಿದನು. ಆತನ ಬಾಣದ ಹೊಡೆತದಿಂದ ಪೆಟ್ಟುತಿಂದ ಹಂದಿಯೂ ಅಲ್ಲಿಯೇ ಸತ್ತುಬಿದ್ದಿತು.

ಸ್ವಲ್ಪಹೊತ್ತಿನ ಮೇಲೆ 'ದೀರ್ಘರವ' ಎಂಬ ಹೆಸರಿನ ನರಿಯು ಆಹಾರಕ್ಕಾಗಿ ಅಲೆಯುತ್ತ ಅಲ್ಲಿಗೆ ಬಂದಿತು. ಸತ್ತುಬಿದ್ದ ಚಿಗರೆ,

ಹಂದಿ, ಬೇಡ ಇವರನ್ನು ಕಂಡಿತು. ಅದಕ್ಕೆ ಬಹಳ ಹರುಷವಾಯಿತು. ಮನಮೊಳಗೆ ಅಂದಿತು: "ದುಃಖವು ಹೇಗೆ ಅಕಸ್ಮಾತ್ತಾಗಿ ಪ್ರಾಣಿಗಳಿಗೆ ಒದಗುವದೋ ಹಾಗೆ ಸುಖವೂ ತಪ್ಪಿಲ್ಲದೆ ಬರುವದು. ಅಹಾ! ಈ ಪ್ರಾಣಿಗಳ ಮಾಂಸದಿಂದ ಒಂದು ತಿಂಗಳ ವರೆಗೆ ನಾನು ಬದುಕಬಲ್ಲೆ. ಮೊದಲು ಈ ಬಿಲ್ಲಿಗೆ ಕಟ್ಟಿದ ನರದ ದಾರವನ್ನು ತಿನ್ನುವೆನು."

ಹೀಗೆಂದು ಆ ನರಿಯು ಬಿಲ್ಲಿಗೆ ಕಟ್ಟಿದ ನರದ ದಾರವನ್ನು ಕಡಿಯತೊಡಗಿತು. ದಾರವು ಚಟ್ಟನೆ ಹರಿಯಿತು. ಮಣಿದ ಬಿಲ್ಲು ನೀಟಾಗಿ, ಅದರ ತುದಿಯು ನರಿಯ ಎದೆಗೆ ತಾಗಿತು. ಈ ಹೊಡೆತಕ್ಕೆ ನರಿಯು ನೆಲಕ್ಕುರುಳಿ ಪ್ರಾಣಬಿಟ್ಟಿತು.

ಚಿಗರೆಯ ಅಥವಾ ಕಾಡುಹಂದಿಯ ಮಾಂಸವನ್ನು ಆ ನರಿಯು ತಿನ್ನಲು ಅಪೇಕ್ಷಿಸಲಿಲ್ಲ; ಬೇಡನ ಮಾಂಸವನ್ನಾದರೂ ತಿನ್ನಲು ಅದು ಬಯಸಲಿಲ್ಲ; ಅದನ್ನೆಲ್ಲ ಕೂಡಹಾಕಬೇಕೆಂದು ಆಲೋಚಿಸಿ, ನರದ ದಾರವನ್ನು ಕಡಿಯಿತು. ನರಿಯ ಜೀನತನವೇ ಅದಕ್ಕೆ ಮುಳುವು ಆಯಿತು.

ಅಭ್ಯಸನಗಳು:–

೧. ಆ ಬೇಡನು ಬೇಟೆಗಾಗಿ ಎಲ್ಲಿ ಅಲೆಯುತ್ತಿದ್ದನು ?
೨. ಅವನು ಯಾವ ಯಾವ ಪ್ರಾಣಿಗಳನ್ನು ಹೊಡೆದು ಕೊಂದನು ?
೩. ಬೇಡನು ಯಾಕೆ ಸತ್ತನು ?
೪. ನರಿಯು ಮೊದಲು ನರದ ದಾರವನ್ನು ತಿನ್ನಲು ಯಾಕೆ ಬಯಸಿತು ?
೫. ನರಿಯು ಯಾಕೆ ಸತ್ತಿತು ?
೬. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ದಾರಿಯಲ್ಲಿ ಆ———ಒಂದು——— ———ಕಂಡನು.

ಆ) ಆತನ——— ಹೊಡತದಿಂದ ——— ಹಂದಿಯು ಅಲ್ಲಿಯೇ

ಇ) ———ಜೀನತನವೇ———ಮುಳುವು-

ಕೆಳಗಿನ ಶಬ್ದಗಳ ಅರ್ಥ ಹೊಂದಿಸಿರಿ:

| | |
|---|---|
| ಕಲ್ಯಾಣಕಟಕ | ನರಿಯ ಹಸರು |
| ವಿಂಧ್ಯಪರ್ವತ | ಊರ ಹೆಸರು |
| ದೀರ್ಘರವ | ಪರ್ವತದ ಹೆಸರು |

# ೮. ದಿಕ್ಕುಗಳು



ರಾಮಕೃಷ್ಣರು ಅಣ್ಣತಮ್ಮಂದಿರು. ರಾಮನು ಹಿರಿಯನು; ಕೃಷ್ಣನು ಕಿರಿಯನು. ಇಬ್ಬರೂ ಕೂಡಿ ಸಂಜೆಗೆ ಆಡ್ಡಾಡಲಿಕ್ಕೆ ಸಮುದ್ರದ ದಂಡೆಯ ಕಡೆಗೆ ನಡೆದರು. ಅದೇ ಆಗ ಸೂರ್ಯನು ಮುಳುಗುತ್ತಿದ್ದನು. ಅತಿ ದೂರದಲ್ಲಿ ಮುಗಿಲು ಸಮುದ್ರದ ನೀರಿಗೆ ಮುಟ್ಟಿದಂತೆ ಕಾಣಿಸುತ್ತಿತ್ತು. ಆ ಅಂಚಿನಲ್ಲಿ ಸೂರ್ಯನು ಕೆಂಪಗೆ ಕಾಣಿಸುತ್ತಿದ್ದನು. ತಂಗಾಳಿ ಬೀಸುತ್ತಿತ್ತು. ಗಿಡಗಳ ಎಲೆಗಳು ಅಲೆದಾಡುತ್ತಿದ್ದವು. ಆಗ ಸೂರ್ಯನ ಕಿರಣಗಳು ಅಲೆದಾಡುವ ಎಲೆಗಳ ಮೇಲೆ ಹೊಂಬಣ್ಣವನ್ನು ಬಳಿಯುತ್ತಿದ್ದವು. ಇದನ್ನೆಲ್ಲ ನೋಡಿ ಕೃಷ್ಣನಿಗೆ ಬಲು ಸೋಜಿಗವೆನಿಸಿತು.

ಕೃಷ್ಣ:— ಅಣ್ಣಾ, ಸೂರ್ಯನು ಕೆಂಪಗೆ ಕಾಣಿಸುವನಲ್ಲ !

ರಾಮ:— ತಮ್ಮಾ, ಸೂರ್ಯನು ಮೂಡುವಾಗ ಮುಳುಗುವಾಗ ಕೆಂಪಗೆ ಕಾಣಿಸುವನು. ಅವನು ಆಕಾಶದಲ್ಲಿ ಮೇಲೆ ಏರಿದಂತೆ ಬೆಳ್ಳಗಾಗುವನು. ಅವನು ಮೂಡುವ ದಿಕ್ಕನ್ನು ಪೂರ್ವದಿಕ್ಕು ಎಂದು ಕರೆಯುವರು. ಮುಂಜಾವಿನಲ್ಲಿ ಹೂಬಿಸಿಲು ಗಿಡಬಳ್ಳಿಗಳ ಮೇಲೆ, ನೀರು ನೆಲಗಳ ಮೇಲೆ ಬಹಳ ಚೆಂದ ಕಾಣಿಸುವದು.

ಕೃಷ್ಣ:– ಅಣ್ಣಾ, ಸೂರ್ಯನು ಆ ನಿಟ್ಟಿನಲ್ಲಿ ಎಷ್ಟು ಹೊತ್ತು ಇರುವನು ?

ರಾಮ:– ತಮ್ಮಾ, ಸೂರ್ಯನು ಒಂದೇ ನಿಟ್ಟಿನಲ್ಲಿ ನಿಲ್ಲುವದಿಲ್ಲ. ಸಾವಕಾಶವಾಗಿ ಮೇಲೆ ಏರುತ್ತಲೇ ಇರುವನು. ಮಧ್ಯಾಹ್ನದಲ್ಲಿ ನೆತ್ತಿಯ ಮೇಲೆ ಬರುವನು. ಆಗ ಅವನು ಬೆಳ್ಳಿಯ ಹಾಗೆ ಬೆಳ್ಳಗೆ ಕಾಣುವನು. ಆಗಂತೂ ಅವನನ್ನು ನೋಡಲಿಕ್ಕೆ ಆಗುವದಿಲ್ಲ. ಕಣ್ಣುಗಳು ಕುಕ್ಕುವವು. ಮುಂದೆ ಅವನು ಕೆಳಗೆ ಇಳಿಯುತ್ತ ಹೋಗುವನು. ಸಂಜೆಗೆ ಈ ನಿಟ್ಟಿನಲ್ಲಿ ಮುಳುಗುವನು. ಅಗೋ ನೋಡು! ಈಗ ಅವನು ಕೆಂಪಗೆ ಕಾಣಿಸುವನು. ಸೂರ್ಯನು ಮುಳುಗುವ ನಿಟ್ಟನ್ನು ಪಶ್ಚಿಮ ದಿಕ್ಕು ಎಂದು ಕರೆಯುವರು.

ಕೃಷ್ಣ:– ಪೂರ್ವ – ಪಶ್ಚಿಮ ದಿಕ್ಕುಗಳು ಎದುರುಬದುರಾಗಿವೆ. (ಪೂರ್ವದ ಕಡೆಗೆ ತಿರುಗಿ) ಈಗ ನನ್ನ ಬಲಗಡೆಗೆ ಇರುವ ನಿಟ್ಟನ್ನು ಯಾವ ದಿಕ್ಕು ಎಂದು ಅನ್ನುವರು ?

ರಾಮ:– ಅದನ್ನು ದಕ್ಷಿಣ ದಿಕ್ಕು ಎಂದು ಅನ್ನುವರು. ಪೂರ್ವದ ಕಡೆಗೆ ಮೋರೆಮಾಡಿಕೊಂಡು ನಿಂತರೆ, ಬಲಗಡೆಗೆ ಆಗುವ ನಿಟ್ಟನ್ನು ದಕ್ಷಿಣ ದಿಕ್ಕು ಎಂದೂ, ಎಡಗಡೆಗೆ ಆಗುವ ನಿಟ್ಟನ್ನು ಉತ್ತರ ದಿಕ್ಕು ಎಂದೂ ಕರೆಯುವರು. ಪೂರ್ವ – ಪಶ್ಚಿಮ ದಿಕ್ಕುಗಳಂತೆ ಉತ್ತರ–ದಕ್ಷಿಣ ದಿಕ್ಕುಗಳೂ ಎದುರುಬದುರಾಗಿರುವವು. ಹೀಗೆ ನಾಲ್ಕು ಮುಖ್ಯ ದಿಕ್ಕುಗಳು. ಕನ್ನಡದಲ್ಲಿ ಕ್ರಮವಾಗಿ ಮೂಡಲು, ಪಡುವಲು, ಬಡಗಲು, ತೆಂಕಲು ಎಂದು ಅವುಗಳಿಗೆ ಹೆಸರು ಉಂಟು.

ಕೃಷ್ಣ:– ಅಣ್ಣಾ, ಬಹಳ ಹೊತ್ತಾಯಿತು. ಹೋಗೋಣ ನಡೆ.

ಅಭ್ಯಾಸಗಳು:—

೧. ರಾಮಕೃಷ್ಣರು ಸಂಜೆಗೆ ಆಡ್ಡಾಡಲಿಕ್ಕೆ ಎಲ್ಲಿಗೆ ಹೋಗಿದ್ದರು ?
೨. ಆಗ ಸೂರ್ಯನು ಹೇಗೆ ಕಾಣಿಸುತ್ತಿದ್ದನು ?
೩. ಸೂರ್ಯನು ಮೂಡುವ ನಿಟ್ಟನ್ನು ಯಾವ ದಿಕ್ಕು ಎಂದು ಕರೆಯುವರು ?
೪. ಉತ್ತರ ದಿಕ್ಕನ್ನು ಹೇಗೆ ಗುರುತಿಸುವಿರಿ ?
೫. ಮುಖ್ಯ ದಿಕ್ಕುಗಳು ಎಷ್ಟು ?

## ೬. ನಾಡಿಗಾಗಿ ದುಡಿ



ಹಿಂದಕ್ಕೆ ಬಾದಾಮಿಯಲ್ಲಿ ಒಬ್ಬ ಯುವಕನು ಇದ್ದನು. ಅವನು ಬಡವನು; ನಾಡಿಗಾಗಿ ದುಡಿಯಲು ಹಂಬಲಿಸುತ್ತಿದ್ದನು. ಸೈನ್ಯದಲ್ಲಿ ಸೇರಿ ದೇಶವನ್ನು ರಕ್ಷಿಸುವದು ಯುವಕರ ಕರ್ತವ್ಯವೆಂದು ತಿಳಿದನು. ಅವನು ಸೈನ್ಯದಲ್ಲಿ ಸೇರಿದನು. ಶೂರ ಸೈನಿಕನೆಂದು ಹೆಸರಾದನು. ಒಮ್ಮೆ ಕಾಳಗದಲ್ಲಿ ಅವನ ಕಾಲುಗಳಿಗೆ ಗಾಯವಾಯಿತು. ಆರೈಕೆ ಹೊಂದಿದನು. ಆದರೆ ಇನ್ನು ಅವನು ಸೈನ್ಯದಲ್ಲಿ ಇರುವದು ಸಾಧ್ಯವಿಲ್ಲ; ಯಾಕಂದರೆ ಅವನ ಕಾಲು ಊನವಾದದರಿಂದ ಅವನಿಗೆ ನಡೆಯಲಿಕ್ಕೇ ಬರುವದಿಲ್ಲ. ಆದರಿಂದ ಅವನು ಮರಳಿ ಮನೆಗೆ ಬರಬೇಕಾಯಿತು.

ಈಗ ಅವನು ಕುಂಟ. ಅವನಿಗೆ ಚಿತ್ರ ಬರೆಯಲು ಬರುವದಿಲ್ಲ. ಕಲ್ಲು ಕಟೆದು ಮೂರುತಿಮಾಡಲು ಗೊತ್ತಿಲ್ಲ. ಹೆಚ್ಚಾಗಿ ವಿದ್ಯಾಭ್ಯಾಸ ಮಾಡಿದವನೂ ಅಲ್ಲ. ಉಳಿದ ಯಾವ ಹೆಚ್ಚಿನ ಕೆಲಸವನ್ನೂ ಅವನು ಅರಿಯನು; ಆದರೆ ನಾಡಿಗಾಗಿ ಏನಾದರೂ ಮಾಡಲೇಬೇಕೆಂದು ಅವನು ಚಡಪಡಿಸುತ್ತಿದ್ದನು. ಒಮ್ಮೆ ಅವನು ತನ್ನ ಗುರುಗಳ

ಕಡೆಗೆ ಹೋದನು. "ನಾನು ನಾಡಿಗಾಗಿ ಏನು ಮಾಡಬಹುದು?" ಎಂದು ಅವರನ್ನು ಕೇಳಿದನು. "ನೀನು ಒಂದು ಕೆಲಸವನ್ನು ಮಾಡಬಹುದು; ಆದರೆ ಆ ಕೆಲಸದ ಫಲವನ್ನು ಮಾತ್ರ ನೀನು ಕಾಣಲಾರೆ. ಬಹಳ ವರ್ಷಗಳಾದ ಮೇಲೆ ನಾಡಿನ ಜನರಿಗೆ ಅದರಿಂದ ಸುಖವಾಗುವದು" ಎಂದು ಗುರುಗಳು ಹೇಳಿದರು.

"ನಾನು ಆ ಕಲಸ ಮಾಡುವೆ; ನಾನು ಆ ಕೆಲಸ ಮಾಡುವೆ" ಎಂದು ಆ ಕುಂಟನು ನುಡಿದನು. "ಹಾಗಾದರೆ ನೀನು ಗಿಡಗಳನ್ನು ಬೆಳೆಯಿಸು. ಪಟ್ಟಣದಿಂದ ದೂರಹೋಗುವ ದಾರಿಗುಂಟ ಬೇವಿನ ಸಸಿಗಳನ್ನು ನೆಡು; ಅವು ಬೆಳೆದು ದೊಡ್ಡವಾಗುವವರೆಗೆ ಅವಕ್ಕೆ ನೀರುಣಿಸು. ನಿನ್ನ ಮೈಯಲ್ಲಿ ಕಸುವು ಇರುವವರೆಗೆ ಹೀಗೆ ಮಾಡುತ್ತ ಹೋಗು" ಎಂದು ಗುರುಗಳು ಉಪದೇಶಮಾಡಿದರು.

ಆ ಕುಂಟನು ದಿನಾಲು ಹಾದಿಗುಂಟ ಬೇವಿನ ಸಸಿಗಳನ್ನು ನೆಡಲು ಆರಂಭಿಸಿದನು. ವರುಷ ವರುಷವೂ ಈ ಕೆಲಸಮಾಡಿದನು. ದುಡಿಯುವಾಗಲೇ ಒಂದು ದಿನ ಮರಣಹೊಂದಿದನು. ಮುಂದೆ ಕೆಲವು ವರುಷಗಳ ತರುವಾಯ ಅವನು ನೆಟ್ಟ ಸಸಿಗಳು ಬೆಳೆದು ದೊಡ್ಡ ಗಿಡಗಳಾದವು.



ಈಗಲೂ ಬಾದಾಮಿಗೆ ಹೋಗುವವರೆಲ್ಲ ಆ ಗಿಡಗಳನ್ನು ನೋಡುವರು; ಅವುಗಳ ನೆರಳಲ್ಲಿ ಕೂಡ್ರುವರು. ಸುಖದಿಂದ ಮುಂದೆ ಪ್ರಯಾಣ ಬೆಳೆಸುವರು. ಗಿಡಗಳನ್ನು ನೆಟ್ಟ ಮಹಾರಾಯನನ್ನು ಎಲ್ಲರೂ ಹರಸುವರು. ಆದರೆ ಅವನ ಹೆಸರು ಮಾತ್ರ ಯಾರಿಗೂ ಗೊತ್ತಿಲ್ಲ.

ಅಭ್ಯಸನಗಳು:—

೧. ಆ ಯುವಕನು ಏನು ಮಾಡಲು ಬಯಸಿದನು ?

೨. ಗುರುಗಳು ಅವನಿಗೆ ಏನು ಮಾಡಲು ಹೇಳಿದರು ?

೩. ಅವನನ್ನು ಈಗಲೂ ಜನರು ಯಾಕೆ ಹರಸುವರು ?

## ೧೦. ಹಕ್ಕಿಯ ತೆರದಲಿ ಪಕ್ಕಗಳಿದ್ದರೆ

ಹಕ್ಕಿಯ ತೆರದಲಿ ಪಕ್ಕಗಳಿದ್ದರೆ
ಗಕ್ಕನೆ ಗಗನಕೆ ಹಾರುತಲಿದ್ದೆ;
ಏರಿಗೆ ಹಾರುತ ಬಾನನು ಸೇರಿ
ತೋರುತ ಲೀಲೆಯ ನಾ ಬರುತಿದ್ದೆ ‖ ೧ ‖
ಹಕ್ಕಿಯ ತೆರದಲಿ ಪಕ್ಕಗಳಿದ್ದರೆ
ಮೂಡಣ ಬೆಟ್ಟದ ಗಟ್ಟವ ಸಾಗಿ
ಮೂಡುವ ರವಿಯನು ನಾ ತರುತಿದ್ದೆ;
ಓಡುವ ಗಾಳಿಯ ಹಿಡಿಯುತಲಿದ್ದೆ ‖ ೨ ‖
ಹಕ್ಕಿಯ ತೆರದಲಿ ಪಕ್ಕಗಳಿದ್ದರೆ
ಚೆಲುವಿನ ಚಂದ್ರನ ಮೇಲಿನ ಇಂದ್ರನ
ತಳತಳ ಮಿನುಗುವ ಹೊಳೆಹೊಳೆ ಹೊಳೆಯುವ
ತಾರೆಗಳೆಲ್ಲವ ತರುತಿದ್ದೆ ‖ ೩ ‖

— ಮ. ಗ. ಶೆಟ್ಟಿ

ಅಭ್ಯಸನಗಳು:—

೧. ಪಕ್ಕಗಳಿದ್ದರೆ ಎಲ್ಲಿಗೆ ಹಾರಬಹುದು ? ಏನೇನು ಮಾಡಬಹುದು ? ಏನೇನು ತರಬಹುದು ? ಎಂದು ಈ ಕವಿತೆಯಲ್ಲಿ ಹೇಳಿದೆ.

೨. ಕೆಳಗಿನ ಶಬ್ದಗಳ ಅರ್ಥವನ್ನು ಹೇಳಿ, ಅವುಗಳನ್ನು ವಾಕ್ಯಗಳಲ್ಲಿ ಉಪಯೋಗಿಸಿರಿ:
ಬಾನ, ಮೂಡಣ, ರವಿ, ಮಿನುಗು, ತಾರೆ.

# ೧೧. ಬಟ್ಟಲ

ಚಿಕ್ಕ ಮಕ್ಕಳು ಹಾಲು ಕುಡಿಯುವಾಗ ಬಟ್ಟಲನ್ನು ಉಪಯೋಗಿಸುವದು ನಿಮಗೆ ಗೊತ್ತಿದೆ. ಅದನ್ನು ಬೆಳ್ಳಿ, ತಾಮ್ರ, ಹಿತ್ತಾಳಿ ಮೊದಲಾದ ಧಾತುಗಳಿಂದ ಮಾಡುವರು. ಆದರೆ ಈ ಹೊತ್ತು ನಿಮಗೆ ಕಾಗದದಿಂದ ಬಟ್ಟಲವನ್ನು ಹೇಗೆ ಮಾಡಬೇಕು ಎಂಬುವದನ್ನು ತೋರಿಸಿಕೊಡಲಾಗುವದು.




ಚಿತ್ರ ೧

೮ ಅಥವಾ ೧೦ ಅಂಗುಲ ಚೌಕಾಗಿರುವ ಕಾಗದದ ತುಂಡನ್ನು ತೆಗೆದುಕೊಳ್ಳಿರಿ. ಅದರ ಆಕೃತಿ ಚಿತ್ರ ೧ರಲ್ಲಿ ತೋರಿಸಿದಂತೆ ಇರಬೇಕು. ಆದರೆ ಅದು ಹೆಚ್ಚು ದೊಡ್ಡದಾಗಿರುವದು.

ಚಿತ್ರ ೧ರಲ್ಲಿ ತೋರಿಸಿದಂತೆ ಕ, ಗ, ಅಕ್ಷರಗಳನ್ನು ಆ ಕಾಗದದ ತುಂಡಿನ ಮೂಲೆಗಳಲ್ಲಿ ಬರೆಯಿರಿ. 'ಕ' ಮೂಲೆಯನ್ನು ಯಾವಾಗಲೂ ಮೇಲೆ ಮಾಡಿ ಹಿಡಿಯಿರಿ. ಕಾಗದದ ತುಂಡನ್ನು ತಿರುವಬೇಡಿರಿ. 'ಗ' ಮೂಲೆ 'ಕ'ದ ಮೇಲೆ ಬರುವಂತೆ ನಿಮ್ಮ ಕಾಗದವನ್ನು ಮಡಿಚಿರಿ. ಈಗ ನಿಮ್ಮ ಕಾಗದವು ಚಿತ್ರ ೨ರಂತೆ ಕಾಣುವದು.



ಚಿತ್ರ

ಇದರ ಮೇಲೆ ಗ, ತ, ದ ಅಕ್ಷರಗಳನ್ನು ಚಿತ್ರ ೩ರಲ್ಲಿ ತೋರಿಸಿದಂತೆ ಬರೆಯಿರಿ. ನೀವು ಈಗ ಬರೆದ 'ಗ' ಮೊದಲು ಬರೆದ 'ಗ'ದ ಮೇಲೆ ಅದೆಯೋ ಇಲ್ಲವೋ ಎಂಬದನ್ನು ನೋಡಿರಿ.




ಚಿತ್ರ ೩

'ಗ' ಮತ್ತು 'ದ' ನಡುವೆ ಸಮಾಂತರದಲ್ಲಿ 'ಜ' ಬರೆಯಿರಿ. ಈಗ ನಿಮ್ಮ ಕಾಗದವು ಚಿತ್ರ ೩ರಂತೆ ಕಾಣುವದು. 'ತ' ಮೂಲೆ 'ಜ' ಮೇಲೆ ಬರುವಂತೆ ಮಡಿಚಿರಿ. ೪ರಲ್ಲಿ ತೋರಿಸಿದಂತೆ ಮೂಲೆಯಲ್ಲಿ 'ಚ' ಬರೆಯಿರಿ. ಈಗ ನಿಮ್ಮ ಕಾಗದವು ಚಿತ್ರ ೪ರಂತೆ ಕಾಣುವದಿಲ್ಲವೇ?



ಚಿತ್ರ ೪

'ದ' ಮೂಲೆಯನ್ನು 'ಚ'ದ ಮೇಲಿಟ್ಟು ಮಡಿಚಿರಿ. ಚಿತ್ರ ೫ರಲ್ಲಿ ತೋರಿಸಿದ್ದಂತೆ ಮೂಲೆಯಲ್ಲಿ 'ದ' ಬರೆಯಿರಿ. ಮೂಲೆಯನ್ನು ಸ್ವಲ್ಪ ತಿರುವಿ, ನೀವು ಮೊದಲು ಬರೆದ 'ಚ'ದ ಮೇಲೆ ಈಗ ಬರೆದ 'ದ' ಬಂದಿದೆಯೋ ಹೇಗೆಂಬದನ್ನು ನೋಡಿರಿ. ಈಗ ನಿಮ್ಮ ಕಾಗದವು ಚಿತ್ರ ೫ರಂತೆ ಕಾಣುವದು.



ಚಿತ್ರ ೫

ಕ; ಗ, ಮೂಲೆಗಳನ್ನು ಹುಡುಕಿರಿ. 'ಗ' ಮೂಲೆಯನ್ನು 'ದ' ಮೂಲೆಯೊಳಗೆ ತುರುಕಿರಿ, ಮಡಿಚಿರಿ. 'ಕ' ಮೂಲೆಯನ್ನು ಹಿಂದೆ ಮಡಿಚಿರಿ. ಈಗ ನಿಮ್ಮ ಬಟ್ಟಲು ಸಿದ್ಧವಾಯಿತು.



ಚಿತ್ರ ೬

ಇದರಂತೆ ಇನ್ನೊಮ್ಮೆ ಮಾಡಲು ಯತ್ನಿಸಿರಿ.

ಅಭ್ಯಾಸಗಳು:—

೧. ಚಿಕ್ಕ ಮಕ್ಕಳು ಹಾಲು ಕುಡಿಯುವ ಬಟ್ಟಲನ್ನು ಯಾತರಿಂದ ಮಾಡುವರು ?
೨. ಈಗ ನೀವು ಬಟ್ಟಲನ್ನು ಯಾತರಿಂದ ತಯಾರಿಸಿದಿರಿ ?
೩. ಈಗ ಮಾಡಿದ ಬಟ್ಟಲನ್ನು ಇನ್ನೊಮ್ಮೆ ಮಾಡಿ ತೋರಿಸಿರಿ.

# ೧೨. ಗಾಂಧಿ ಟೊಪ್ಪಿಗೆ



ಮಕ್ಕಳೇ, ಈಗ ನೀವು ಆಡಿ ಆಡಿ ದಣಿದಿರುವಿರಿ. ನನ್ನ ಕತೆಯನ್ನು ಹೇಳುವೆ, ಕೇಳಿರಿ. ನನ್ನನ್ನು ಗಾಂಧಿಯ ಟೊಪ್ಪಿಗೆ ಎಂದು ಕರೆಯುವರು. ನಾನು ಮೊದಲು ಹೊಲದಲ್ಲಿ ಬೆಳೆದೆ. ಕಾಯಿಯೊಳಗಿಂದ ಹೊರಬಿದ್ದೆ. ಆಗ ನನಗೆ ಹತ್ತಿ ಎಂದು ಕರೆದರು.

ಒಂದು ದಿನ ಮುಂಜಾವಿನಲ್ಲಿ ಸಾಲೆಯ ಮಕ್ಕಳು ನನ್ನ ಹತ್ತರ ಬಂದರು. ಎಲ್ಲರೂ ಕೂಡಿ, ಕಾಯಿಯೊಳಗಿಂದ ನನ್ನನ್ನು ಬಿಡಿಸಿ, ತಮ್ಮ ಉಡಿಯಲ್ಲಿ ಹಾಕಿಕೊಂಡರು. ಕಡೆಗೆ ಒಂದು ಗಂಟಿನಲ್ಲಿ ನನ್ನನ್ನು ಕಟ್ಟಿ, ಸಾಲೆಗೆ ಒಯ್ದರು. ಒಂದು ದೊಡ್ಡ ಡಬ್ಬಿಯಲ್ಲಿ ಹಾಕಿ ಜತನಮಾಡಿದರು.

ಗಾಂಧಿ ಅಜ್ಜನ ಹಬ್ಬ ಬಂದಿತು. ಡಬ್ಬಿಯಿಂದ ನನ್ನನ್ನು ಹೊರಗೆ ತೆಗೆದರು. ಎಲ್ಲ ಮಕ್ಕಳಿಗೂ ನನ್ನನ್ನು ಸ್ವಲ್ಪ ಸ್ವಲ್ಪ ಹಂಚಿದರು. ಅವರೆಲ್ಲರು ಕಸರು ತೆಗೆದು ನನ್ನನ್ನು ಸ್ವಚ್ಛಮಾಡಿದರು. ಸಣ್ಣ ಮಣೆಯ ಮೇಲೆ ಇಟ್ಟರು. ಕುಡದಿಂದ ಅರೆದರು. ನನ್ನ ಹೊಟ್ಟೆಯಲ್ಲಿದ್ದ ಕಾಳುಗಳು ಹೊರಗೆ ಬಂದವು. ಆಗ ನಾನು ಅರಳೆಯಾದೆ.

ಬಿಲ್ಲಿನಿಂದ ಹೊಡೆದು ತಿಳಿ ಮಾಡಿದರು. ಮಲ್ಲಿಗೆಯ ಹೂವಿನಂತೆ ಮೃದುವಾದೆ. ಹೀಗೆ ಹಿಂಜಿ ನನ್ನನ್ನು ಮಣೆಯ ಮೇಲೆ ಇಟ್ಟರು. ಸಣ್ಣ ಸಳಿಗೆ ಸುತ್ತಿ ತೀಡಿದರು. ಆಗ ನಾನು ಹಂಜಿಯಾದೆ.





ನನ್ನನ್ನು ಎಡಗೈಯಲ್ಲಿ ಹಿಡಿದು ತಕಲಿಯ ಕೊಕ್ಕೆಗೆ ಸಿಗಿಸಿದರು. ತಕಲಿಯನ್ನು ತಿರುವುತ್ತ ಸಾವಕಾಶ ವಾಗಿ ಎಳೆದರು. ಆಗ ನಾನು ಎಳೆಯಾದೆ. ತಕಲಿಗೆ ಸುತ್ತಿದರು. ಲಡಿಯನ್ನು ಮಾಡಿ ಗಾಂಧಿ ಅಜ್ಜನ ಪ್ರತಿಮೆಗೆ ಹಾಕಿದರು.

ಅಜ್ಜನ ಕೊರಳಲ್ಲಿ ಕುಳಿತೆ. ಅಜ್ಜನ ಪೂಜೆ ಮಾಡಿದರು. ನನ್ನ ಪೂಜೆಯೂ ಆಯಿತು. ಅಜ್ಜನ ನೂಲು ಎಂದು ನನಗೆ ನಮಿಸಿದರು.



ಮರುದಿನ ಮಗ್ಗದ ಮನೆಗೆ ಹೋದೆ. ಹಾಸುಮಾಡಿ ಮಗ್ಗದ ಮೇಲೆ ಹಾಕಿದರು. ಲಟ್ ಸಟ್' ಎಂದು ಸಪ್ಪಳಮಾಡುತ್ತ ನೆಯ್ಯಹತ್ತಿದರು. ಆಗ ನಾನು ಬಿಳಿಯ ಅರಿವೆಯಾದೆ. ಸಿಂಪಿಗನ ಮನೆಗೆ ಕಳಿಸಿದರು. ಅವನು ನನ್ನನ್ನು ಹೊಲಿದನು. ಈಗ ನಾನು ಟೊಪ್ಪಿಗೆ ಯಾದೆ. ನನ್ನನ್ನು ಗಾಂಧಿಟೊಪ್ಪಿಗೆಯೆಂದು ಕರೆಯತೊಡಗಿದರು.



ತನ್ನ ಮೊದಲಿನ ಮನೆಗೆ ಓಡಿಬಂದಿತು. ಹೋದ ಬೆಕ್ಕು ಮ ಬಂದಕೂಡಲೆ, ಆ ಅಕ್ಕತಂಗಿಯರಿಗೆ ಬಹಳ ಹರುಷವಾಯಿತು. ಅವರೆಲ್ಲರು ಕೂಡಿದರು. ಅದರೊಡನೆ ಮಾತಾಡತೊಡಗಿದರು.

ಸರಲೆ:– ಸುಂದರೀ, ಸುಂದರೀ, ಎಲ್ಲಿಗೆ ಹೋಗಿದ್ದೆ ?

ಸುಂದರಿ –ರಾಣಿಯನ್ನು ಕಾಣಬೇಕೆಂದು ಅರಮನೆಗೆ ಹೋಗಿದ್ದೆ.

ಕಮಲೆ:– ಅಲ್ಲಿ ಏನೇನು ಮಾಡಿದೆ ?

ಸುಂದರಿ:–ರಾಣಿಯ ಮಂಚದ ಕೆಳಗೆ ಇದ್ದ ಇಲಿಯನ್ನು ತಿಂದೆ.

ವಿಮಲೆ:– ರಾಣಿ ಏನು ಉಡುಗೊರೆ ಕೊಟ್ಟಳು ?

ಸುಂದರಿ:– ರಾಣಿಯು ನನಗೆ ಅರಮನೆಯಲ್ಲಿಯೇ ಇರಲು ಹೇಳಿದಳು. ನಾನು ನಿಮ್ಮನ್ನೆಲ್ಲ ಅಗಲಿ ಹೇಗೆ ಇರಲಿ? ಓಡಿ ಬಂದುಬಿಟ್ಟೆ.

ಅಭ್ಯಸನಗಳು:–

೧. ಆ ಬೆಕ್ಕಿಗೆ ಏನೆಂದು ಹೆಸರು ಇಟ್ಟಿದ್ದರು ?

೨. ಬೆಕ್ಕು ಅರಮನೆಗೆ ಯಾಕೆ ಹೋಯಿತು ?

೩. ರಾಣಿಯು ಬೆಕ್ಕನ್ನು ನೋಡಿ ಏನು ಅಂದಳು ?

೪. ಬೆಕ್ಕನ್ನು ಯಾಕೆ ಹೊಡೆದು ಓಡಿಸಿದರು ?

೫. ಕೆಳಗಿನ ವಾಕ್ಯಗಳಲ್ಲಿ ಕ್ರಿಯಾಪದಗಳನ್ನು ಗುರುತಿಸಿರಿ:

ಅ) ಸುಂದರಿ ಅಲ್ಲಿಗೆ ಬಂದಿತು.

ಆ) ನಡುಮನೆಯಲ್ಲಿ ರಾಣಿಯು ಕುಳಿತಿದ್ದಳು.

ಇ) ರಾಣಿಯು ಅದನ್ನು ನೋಡಿದಳು.

## ೧೪. ಚಂದಪ್ಪನ ಅಂಗಿ

ರಾತ್ರಿಯ ಸಮಯ. ತಂಪಾದ ಗಾಳಿಯು ಬೀಸುತ್ತಿತ್ತು. ಚಂದಪ್ಪನು ಚಳಿಯಲ್ಲಿ ಬರಿಮೈಯಿಂದ ತಿರುಗಾಡುತ್ತಿದ್ದನು. ಅವನು ತಾಯಿಯ ಹತ್ತಿರ ಹೋದನು. "ಅವ್ವಾ, ಅವ್ವಾ, ನನಗೆ ಚಳಿ ಬಹಳ ಹತ್ತಿದೆ. ನನಗೆ ಒಂದು ಅಂಗಿಯನ್ನು ಹೊಲಿದು ಕೊಡು" ಎಂದು ಅಂದನು.

ತಾಯಿ:– ಒಳ್ಳೆಯದು, ಹೊಲಿದುಕೊಡುವೆ. ಬಾ, ನಿನ್ನ ಮೈಯ ಅಳತೆ ನೋಡುವೆ.

ಆಗ ಚಂದಪ್ಪನಿಗೆ ಬಲು ಹಿಗ್ಗು. ತಾಯಿಯು ಮುಗಿಲಲ್ಲಿ ತೇಲುತ್ತಿರುವ ತೆಳ್ಳನ್ನ ಬಿಳಿ ಮೋಡವನ್ನು ತೆಗೆದುಕೊಂಡು, ಅವನ ಮೈಗೆ ಹಿಡಿದು ಅಳತೆ ನೋಡತೊಡಗಿದಳು.

ಚಂದಪ್ಪ:– ಅವ್ವಾ, ಅವ್ವಾ, ಸ್ವಲ್ಪ ತಡೆ. ನನಗೆ ಬಣ್ಣದ ಅರಿವೆಯ ಅಂಗಿಯೇ ಬೇಕು; ಇದು ಬೇಡ.

ತಾಯಿ:– ಮಗೂ, ಹೀಗೆ ಹಟಮಾಡಬಾರದು. ಮೊದಲು ಈ ಅಂಗಿಯು ನಿನ್ನ ಮೈಗೆ ಹೊಂದಿಕೆಯಾದರೆ, ಅದಕ್ಕೆ ಬಣ್ಣ ಎದ್ದಿ ಕೊಡುವೆ.

ಚಂದಪ್ಪ:– ಯಾವ ಬಣ್ಣ ಕೊಡುವೆ? ಕೆಂಪು ಇಲ್ಲವೆ ಹಳದಿ ಇರಲಿ. ಬಿಳಿಯ ಹಾಗು ಕರಿಯ ಬಣ್ಣಗಳು ನನಗೆ ಬೇಡ.

ತಾಯಿ:– ಹಾಗೇ ಆಗಲಿ.

ಹೀಗೆ ಮಾತಾಡುತ್ತ ತಾಯಿಯು ಅಂಗಿಯನ್ನು ಹೊಲಿದಳು. ಚಂದಪ್ಪನು ಉಬ್ಬಿನಿಂದ ತೊಟ್ಟುಕೊಂಡನು. ಮರುದಿನ ಆ ಅಂಗಿಯು ಬಿಗಿಯಾಗತೊಡಗಿತು.

ಚಂದಪ್ಪ:– ಅವ್ವಾ, ಈ ಅಂಗಿಯನ್ನು ಸ್ವಲ್ಪ ಸಡಿಲು ಮಾಡುವೆಯಾ?

ತಾಯಿ:– "ಆಗಲಿ ಮಗು!" ಎಂದು ಸ್ವಲ್ಪ ಸಡಿಲುಮಾಡಿದಳು. ದಿನಾಲು ಚಂದಪ್ಪನು ಬೆಳೆಯಹತ್ತಿದನು. ಅಂಗಿಯನ್ನು ಸಡಿಲು ಮಾಡೆಂದು ತಾಯಿಗೆ ಕಾಡಹತ್ತಿದನು. ತಾಯಿಯು ದಿನಾಲು ಅಂಗಿಯನ್ನು ಸಡಿಲು ಮಾಡಬೇಕಾಯಿತು. ಹುಣ್ಣಿವೆಯ ದಿನ ತಾಯಿ ಚಂದಪ್ಪನನ್ನು ಕರೆದಳು.

ತಾಯಿ:– ಮಗು, ಈಗ ನೀನು ಪೂರ್ಣ ಬೆಳೆದಿರುವೆ. ನಿನ್ನ ಬೆಳಕು ಹೆಚ್ಚು. ಈಗ ಈ ಅಂಗಿಯನ್ನು ಹಾಕಿಕೋ.

ಚಂದಪ್ಪ:– ಅವ್ವಾ, ಈ ಅಂಗಿಯು ಹಾಳತ ಆಗುವದು, ಇರಲಿ.

ಮರುದಿನ ಚಂದಪ್ಪನು ಆ ಅಂಗಿಯನ್ನು ಹಾಕಿಕೊಂಡನು. ಅದು ಸಡಿಲು ಆಯಿತು. ತಾಯಿಯು ಅದನ್ನು ಬಿಗಿಮಾಡಿ ಕೊಟ್ಟಳು. ಮರುದಿನವೂ ಇದೇ ಹಾಡು. ಅವಳಿಗೆ ದಿನಾಲು ಅಂಗಿಯನ್ನು ಬಿಗಿಮಾಡಿಕೊಡಬೇಕಾಯಿತು; ಯಾಕಂದರೆ ಚಂದಪ್ಪನು ದಿನಾಲು ಕೊರಗಹತ್ತಿದನು. ದಿನಾಲು ತನ್ನ ಸಲುವಾಗಿ ತಾಯಿಯು ಕಷ್ಟಪಡುವಳೆಂದು ಚಂದಪ್ಪನಿಗೆ ಅನಿಸಿತು.

ಚಂದಪ್ಪ:– ಅವ್ವಾ, ನನಗೆ ಅಂಗಿಯ ಬಲವಿಲ್ಲ. ದಿನಾಲು ನೀನು ಅದನ್ನು ಸರಿಪಡಿಸಬೇಕಾಗುವದು. ನನಗೆ ಅಂಗಿಯೇ ಬೇಡ.

ಅಭ್ಯಸನಗಳು:–

೧. ಚಂದಪ್ಪನು ತಾಯಿಗೆ ಏನು ಕೇಳಿದನು ?

೨. ತಾಯಿಯು ಅಂಗಿಯನ್ನು ಯಾತರಿಂದ ಹೊಲಿದಳು ?

೩. ಚಂದಪ್ಪನಿಗೆ ಅಂಗಿ ಯಾಕೆ ಹಾಳತ ಆಗಲಿಲ್ಲ ?

೪. ಅರ್ಥ ಸರಿಯಾಗುವಂತೆ ಹೊಂದಿಸಿ ಓದಿರಿ:

| | | |
|---|---|---|
| ಚಂದಪ್ಪನು ಪೂರ್ಣ ಬೆಳೆದ ದಿನ | } | ಅಮಾವಾಸ್ಯೆ. |
| ಚಂದಪ್ಪನು ಕಾಣದ ದಿನ | | ಗಣೇಶ ಚವತಿ |
| ಚಂದಪ್ಪನನ್ನು ನೋಡಬಾರದ ದಿನ | | ಹುಣ್ಣಿವೆ. |

೫. 'ಚಂದಪ್ಪನು ಅಂಗಿಯನ್ನು ಬೇಡಿದನು'. ಅಂಗಿಯನ್ನು ಯಾರು ಬೇಡಿದರು ? ಚಂದಪ್ಪನು ಬೇಡಿದನು. ಈ ವಾಕ್ಯದಲ್ಲಿ ಬೇಡುವ ಕ್ರಿಯೆಯನ್ನು ಮಾಡುವವನು ಚಂದಪ್ಪನು. ಕ್ರಿಯೆಯನ್ನು ಮಾಡುವವನಿಗೆ ಕರ್ತೃ ಎಂಬ ಹೆಸರು. ಈ ವಾಕ್ಯದಲ್ಲಿ ಚಂದಪ್ಪನು ಕರ್ತೃಪದವು

ಕೆಳಗಿನ ವಾಕ್ಯಗಳಲ್ಲಿ ಕರ್ತೃಪದಗಳನ್ನು ಗುರುತಿಸಿರಿ:

ಅ) ತಾಯಿಯು ಅಂಗಿಯನ್ನು ಹೊಲಿದಳು.

ಆ) ಚಂದಪ್ಪನು ಅಂಗಿಯನ್ನು ಹಾಕಿಕೊಂಡನು.

ಇ) ಚಂದಪ್ಪನಿಗೆ ಅಂಗಿ ಹಾಳತಾಗಲಿಲ್ಲ.

ಈ) ಮನೆಯಲ್ಲಿ ರಾಮನು ಇದ್ದಿಲ್ಲ.

# ೧೫. ಮಂಗಗಳ ಉಪವಾಸ



ಬಾಳೆಯ ತೋಟದ
ಪಕ್ಕದ ಕಾಡೊಳು
ವಾಸಿಸುತಿದ್ದವು ಮಂಗಗಳು;

ಮಂಗಗಳೆಲ್ಲವು
ಒಟ್ಟಿಗೆ ಸೇರುತ
ಒಂದುಪವಾಸವ ಮಾಡಿದವು ‖ ೧ ‖

ಏನೂ ತಿನ್ನದೆ
ಮಟಮಟ ನೋಡುತ
ಇದ್ದವು ಮರದಲಿ ಕುಳಿತಲ್ಲೆ;

"ನಾಳೆಗೆ ತಿಂಡಿಯು
ಈಗಲೆ ಹುಡುಕುವ
ಬನ್ನಿರಿ" ಎಂದಿತು ಕಪಿಯೊಂದು ‖ ೨ ‖

"ಹೌದಣ್ಣಾ" ಎಂ
ದೆನ್ನುತ ಎಲ್ಲವು
ಬಾಳೆಯ ತೋಟಕೆ ಹಾರಿದವು.

ತೋಟದಿ ಬಾಳೆಯ
ಹಣ್ಣನು ನೋಡಲು
ಆಸೆಯು ಹೆಚ್ಚಿತು ನೀರೂರಿ ॥ ೩ ॥

"ಸುಲಿದೇ ಇಡುವ,
ಆಗದೆ ?" ಎಂದಿತು
ಆಸೆಯ ಮರಿಕಪಿಯೊಂದಾಗ.

'ಹೌದೆ' ನ್ನುತ
ಹಣ್ಣನು ಸುಲಿದವು
ಕೈಯೊಳೆ ಹಿಡಿದೂ ಕುಳಿತಿರಲು ॥ ೪ ॥

"ಕೈಯೊಳಗೇತಕೆ ?
ಬಾಯೊಳಗಿಟ್ಟರೆ
ಆಗದೆ ?" ಎಂದಿತು ಇನ್ನೊಂದು.

ಹಣ್ಣನು ಬಾಯಲಿ
ಇಟ್ಟವು. "ಜಗಿದೇ
ಇಡುವೆವು" ಎಂದಿತು ಮತ್ತೊಂದು. ॥ ೫ ॥

ಜಗಿದೂ ಜಗಿದೂ
ನುಂಗಿದುವೆಲ್ಲಾ !
ಆಗಲೆ ಮುಗಿಯಿತು ಉಪವಾಸ ! ॥ ೬ ॥

— ಮ. ಶಂ. ರಾವ

ಅಭ್ಯಸನಗಳು:—

೧. ಮಂಗಗಳು ಎಲ್ಲಿ ಇರುತ್ತಿದ್ದವು ?
೨. ಅವು ಏನು ಮಾಡಬೇಕೆಂದು ಬಯಸಿದವು ?
೩. ಬಾಳೆಯ ತೋಟಕ್ಕೆ ಅವು ಏಕೆ ಹಾರಿದವು ?

೪. ಆಸೆಯ ಮರಿಕಪಿ ಏನು ಅಂದಿತು ?
೫. ಮಂಗಗಳ ಉಪವಾಸ ಹೇಗೆ ಮುಗಿಯಿತು ?
೬. ಅರ್ಥ ಹೇಳಿರಿ:
ಅ) ಆಸೆಯು ಹೆಚ್ಚಿತು ನೀರೂರಿ.
ಆ) ಕೈಯೊಳಗೇತಕೆ ?
ಇ) ಜಗಿದೇ ಇಡುವೆವು.
೭. ಕೆಳಗಿನ ವಾಕ್ಯಗಳಲ್ಲಿ ಕರ್ತೃ ಪದಗಳನ್ನು ಗುರುತಿಸಿರಿ:
ಅ) ಮಂಗಗಳು ಕಾಡೊಳು ವಾಸಿಸುತ್ತಿದ್ದವು.
ಆ) ಅವು ಹಣ್ಣನು ಬಾಯಲಿ ಇಟ್ಟವು.
ಇ) ಆಗಲೆ ಉಪವಾಸ ಮುಗಿಯಿತು.

## ೧೬. ಸರತಿಯ ಸಾಲು

ಅಂದು ಮಹಾಶಿವರಾತ್ರಿ. ಗೋಕರ್ಣದಲ್ಲಿ ದೊಡ್ಡ ಜಾತ್ರೆ. ನೆರೆಹಳ್ಳಿಗಳಿಂದ ಜನರು ತಂಡತಂಡವಾಗಿ ಜಾತ್ರೆಗೆ ನೆರೆದಿದ್ದರು. ಶಂಕರನು ಹಣ್ಣುಕಾಯಿ ತಕ್ಕೊಂಡು ಹೊರಟನು. ಮಹಾಬಲೇಶ್ವರನ ದರ್ಶನಕ್ಕಾಗಿ ಗುಡಿಗೆ ಬಂದನು. ಅಲ್ಲಿ ಗದ್ದಲವೇ ಗದ್ದಲ! ದೇವರಿಗೆ ನೈವೇದ್ಯ ಕೊಡಲು ನಾಮುಂದೆ ನೀಮುಂದೆ ಎಂದು ಜನರು ನುಗ್ಗಾಡುತ್ತಿದ್ದರು. ಅದನ್ನು ನೋಡಿ, ಶಂಕರನು ಒಂದು ಕಡೆ ನಿಂತುಕೊಂಡನು.

ಅಷ್ಟರಲ್ಲಿ ಗುಡಿಯೊಳಗೆ ಯಾರೋ ದೊಡ್ಡ ದನಿಯಿಂದ ಅಳಹತ್ತಿದರು. ಅದನ್ನು ಕೇಳಿ ಬಳಿಯಲ್ಲಿದ್ದ ಸ್ವಯಂಸೇವಕರು ಓಡಿ ಬಂದರು. ಜನರನ್ನು ಲಗುಬಗೆಯಿಂದ ಎಡಕ್ಕೆ ಬಲಕ್ಕೆ ಸರಿಸುತ್ತ ಗುಡಿಯೊಳಗೆ ಹೊಕ್ಕರು. ಅಳುತ್ತಿದ್ದವನನ್ನು ಹೊರಗೆ ತಂದರು. ಅಳುತ್ತಿದ್ದವನು ರಾಮಕೃಷ್ಣ. ಅವನ ಹೊಸ ಅಂಗಿ ನಾಲ್ಕಾರು ಕಡೆಗೆ ಹರಿದುಹೋಗಿತ್ತು. ಮೈ ಕೈಗಳಿಗೆ ಮಣ್ಣು ಹತ್ತಿತ್ತು. ಬಲಗಾಲಿನ ಕಿರಿಬೆರಳಿನಿಂದ ರಕ್ತ ಸೋರುತ್ತಿತ್ತು. ಸ್ವಯಂಸೇವಕರಲ್ಲಿ ಕೆಲವರು ರಾಮಕೃಷ್ಣನನ್ನು ಎತ್ತಿಕೊಂಡು ಮನೆಗೆ ಒಯ್ದರು.



ಬಳಿಕ ಸ್ವಯಂಸೇವಕರು ಜನರಿಗೆ ನುಗ್ಗಾಡಬೇಡಿರಿ ಎಂದು ಹೇಳಹತ್ತಿದರು. ಅವರನ್ನು ಸರಿಸುತ್ತ ಒಂದು ಸಾಲಿನಲ್ಲಿ ನಿಲ್ಲಿಸಿದರು. ಸರತಿಯ ಪ್ರಕಾರ ಒಬ್ಬೊಬ್ಬರನ್ನು ದೇವರ ದರ್ಶನಕ್ಕೆ ಬಿಡಹತ್ತಿದರು. ಆಗ ಗದ್ದಲ ಕಡಿಮೆಯಾಯಿತು. ಶಂಕರನೂ ಸಾಲಿನಲ್ಲಿ ನಿಂತನು. ಆ ಮೇಲೆ ಬಂದ ಜನರು ಹಿಂದೆ ಹಿಂದೆ ಸಾಲಾಗಿ ನಿಲ್ಲಹತ್ತಿದರು.

ಶಂಕರ:– ಇದೇನು? ನಾವು ಇರಿವೆಗಳಂತೆ ಸಾಲಾಗಿ ಹೋಗಬೇಕಾಯಿತಲ್ಲ?

ಸ್ವಯಂಸೇವಕ:– ಹೌದು. ಹೀಗೆ ಸಾಲಾಗಿ ನಿಲ್ಲದಿದ್ದರೆ ಇದೀಗ ರಾಮಕೃಷ್ಣನಿಗೆ ಆದಂಥ ಕೇಡು ಎಲ್ಲರಿಗೂ ಆಗುವದು. ಸರತಿ ಬಂದಂತೆ ಒಬ್ಬೊಬ್ಬರೇ ಮುಂದೆ ಹೋಗಬೇಕು. ಇದರಿಂದ ಯಾರಿಗೂ ತೊಂದರೆಯಾಗುವದಿಲ್ಲ.

ಶಂಕರ:– ಹೌದು. ತುಸು ತಡವಾದರೂ ಅಡ್ಡಿಯಿಲ್ಲ. ಸರತಿಯಂತೆ ಹೋಗುವದೇ ಒಳಿತು.

ಸ್ವಯಂಸೇವಕ:– ದೊಡ್ಡ ಪಟ್ಟಣಗಳಲ್ಲಿಯೂ ಈ ಸರತಿಯ ಸಾಲಿನ ಉಪಯೋಗ ಬಹಳ. ಮೋಟರು ಉಗಿಬಂಡಿಗಳ

ನಿಲ್ದಾಣಗಳಲ್ಲಿ ಮತ್ತು ಸಿನೆಮಾ ನಾಟಕ ಮಂದಿರಗಳಲ್ಲಿ ತಿಕೀಟು ಕೊಳ್ಳುವಾಗ, ಸರತಿಯ ಸಾಲಿನಲ್ಲಿ ನಿಲ್ಲಬೇಕು. ಗಾಡಿಗಳನ್ನು ಹತ್ತುವಾಗ, ಮತ್ತು ಇಳಿಯುವಾಗ ಸರತಿ ಕಾಯಬೇಕು. ಅವಸರವಿದ್ದರೆ ತುಸು ಮೊದಲೇ ಬರಬೇಕು; ಸರತಿಯ ಸಾಲಿನಲ್ಲಿ ನಿಲ್ಲಬೇಕು; ಅಂದರೆ ಅನುಕೂಲವಾಗುವದು.

ಅಷ್ಟರಲ್ಲಿ ಶಂಕರನ ಸರತಿ ಬಂದಿತು, ಗುಡಿಯೊಳಗೆ ಹೋದನು. ದೇವರಿಗೆ ಹಣ್ಣುಕೊಟ್ಟು ಕಾಯಿ ಒಡಿಸಿ, ದೇವರ ದರ್ಶನ ತಕ್ಕೊಂಡನು. "ಸರತಿಯ ಸಾಲು ಮಾಡಿದ್ದರಿಂದ ಎಲ್ಲರಿಗೂ ತೊಂದರೆಯಿಲ್ಲದೆ ಮಹಾಬಲೇಶ್ವರನ ದರ್ಶನವಾಯಿತು" ಎಂದು ಅನ್ನುತ್ತ ಶಂಕರನು ಬಿಡಾರಕ್ಕೆ ಹೋದನು.

ಅಭ್ಯಸನಗಳು:—

೧. ಶಂಕರನು ಒಂದು ಕಡೆ ಯಾಕೆ ನಿಂತುಕೊಂಡನು ?

೨. ಸ್ವಯಂಸೇವಕರು ರಾಮಕೃಷ್ಣನನ್ನು ಎತ್ತಿಕೊಂಡು ಯಾಕೆ ತಂದರು ?

೩. ಸ್ವಯಂಸೇವಕರು ಜನರನ್ನು ಸಾಲಾಗಿ ಯಾಕೆ ನಿಲ್ಲಿಸಿದರು ?

೪. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಸರತಿಯ ಸಾಲನ್ನು ಎಲ್ಲಿ ಎಲ್ಲಿ ಉಪಯೋಗಿಸುವರು ?

೫. ಕೆಳಗಿನ ಶಬ್ದಗಳನ್ನು ಮುಂದಿನ ವಾಕ್ಯಗಳಲ್ಲಿ ಹೊಂದಿಸಿ ಬರೆಯಿರಿ:
ಕೇಡು, ತೊಂದರೆ, ನೋವು.

ಅ) ಗದ್ದಲದಲ್ಲಿ ನುಗ್ಗಾಡಿದರೆ ಮೈ ——— ಆಗುವದು.

ಆ) ಸಾಲಾಗಿ ನಿಲ್ಲದಿದ್ದರೆ ರಾಮಕೃಷ್ಣನಿಗೆ ಆದಂತೆ ——— ಎಲ್ಲರಿಗೂ ಆಗುವದು.

ಇ) ಸರತಿಯ ಸಾಲುಮಾಡಿದರೆ ಯಾರಿಗೂ ——— ಆಗುವದಿಲ್ಲ.

೬. ಕೆಳಗಿನ ವಾಕ್ಯಗಳಲ್ಲಿ ಕರ್ತೃ ಪದಗಳನ್ನು ಹುಡುಕಿರಿ:

ಅ) ಜನರು ತಂಡತಂಡವಾಗಿ ಜಾತ್ರೆಗೆ ನೆರೆದಿದ್ದರು.

ಆ) ಶಂಕರನು ಒಂದು ಕಡೆ ನಿಂತುಕೊಂಡನು.

ಇ) ಸ್ವಯಂಸೇವಕರು ಜನರನ್ನು ಸಾಲಾಗಿ ನಿಲ್ಲಿಸಿದರು.

ಈ) ಶಂಕರನೂ ಸಾಲಿನಲ್ಲಿ ನಿಂತನು.

# ೧೭. ವಿಟ್ಟಪ್ಪನ ಜಾಣತನ



ವಿಟ್ಟಪ್ಪನು ಒಬ್ಬ ವ್ಯಾಪಾರಸ್ಥನು. ಒಮ್ಮೆ ವ್ಯಾಪಾರದಲ್ಲಿ ಅವನಿಗೆ ದೊಡ್ಡ ಹಾನಿಯಾಯಿತು. ಅದರಿಂದ ಅವನು ಸಾಲಗಾರನಾದನು. ಮನೆಯಲ್ಲಿಯ ಎಲ್ಲ ಸಾಮಾನುಗಳನ್ನು ಮಾರಿದರೂ ಸಾಲವು ತೀರಲಿಲ್ಲ. ಆಗ ಅವನಿಗೆ ತಟ್ಟನೆ ಒಂದು ಸಂಗತಿಯ ನೆನಪು ಆಯಿತು.

ಅವನ ತಂದೆಯು ವಿನೋದನೆಂಬವನ ಹತ್ತಿರ ಒಂದು ಕಬ್ಬಿಣದ ತಿಜೋರಿಯನ್ನು ಇಟ್ಟಿದ್ದನು. ಅದನ್ನು ಬೇಡಲು ವಿನೋದನ ಮನೆಗೆ ಹೋದನು. ವಿನೋದನು ವಿನಯದಿಂದ ವಿಟ್ಟಪ್ಪನನ್ನು ಉಪಚರಿಸಿದನು.

ವಿಟ್ಟಪ್ಪ:—ವಿನೋದಾ, ನಮ್ಮ ತಿಜೋರಿಯನ್ನು ಕೊಡುವೆಯಾ? ಅದನ್ನು ಈಗ ಮಾರಬೇಕಾಗಿದೆ.

ವಿನೋದ:—ಓಹೋ! ನಿಮ್ಮ ತಂದೆಯವರು ನಮ್ಮ ಮನೆಯಲ್ಲಿ ಒಂದು ತಿಜೋರಿಯನ್ನು ಇಟ್ಟಿದ್ದರು. ಅದು ಈಗ ಇಲ್ಲವಲ್ಲ !

ವಿಟ್ಟಪ್ಪ:— ಯಾಕೆ, ಏನಾಯಿತು ?

ವಿನೋದ:— ಏನು ಹೇಳಲಿ ? ಒಂದು ದಿನ ರಾತ್ರಿ ಇಲಿಗಳು ತಿಜೋರಿಯನ್ನು ತಿಂದುಬಿಟ್ಟವು. ನಮ್ಮಲ್ಲಿ ಇಲಿಗಳ ಉಪದ್ರವ ಬಹಳ.

ಈ ಮಾತುಕೇಳಿ ವಿಟ್ಟಪ್ಪನಿಗೆ ಸೋಜಿಗವಾಯಿತು. "ಇಲಿಗಳು ತಿಜೋರಿಯನ್ನು ತಿನ್ನಬಹುದೇ ? ಇದೆಲ್ಲ ವಿನೋದನ ಮೋಸ !"

ಎಂದು ಮನಸ್ಸಿನಲ್ಲಿಯೇ ಮಿಡುಕುತ್ತ ಮನೆಗೆ ಹೋದನು. ವಿನೋದನು ನಕ್ಕನು. ಕೆಲವು ದಿನಗಳಾದ ಮೇಲೆ ವಿಟ್ಟಪ್ಪನು ವಿನೋದನ ಮನೆಗೆ ಮತ್ತೆ ಬಂದನು.

ವಿಟ್ಟಪ್ಪ:– ವಿನೋದಾ, ಇಂದು ಊರಮುಂದಿನ ತೋಟಕ್ಕೆ ನಾವು ಊಟಮಾಡಲು ಹೋಗುತ್ತೇವೆ. ನಿಮ್ಮ ಶಂಕರನನ್ನು ಕಳುಹಿಸುವೆಯಾ ?

ವಿನೋದ:– ಆಗಲಿ; ಕರೆದುಕೊಂಡು ಹೋಗು.

ವಿಟ್ಟಪ್ಪನು ಶಂಕರನನ್ನು ಕರೆದುಕೊಂಡು ಹೋದನು. ಸಂಜೆಯಾಯಿತು. ಕತ್ತಲೆ ಕವಿಯಿತು. ಶಂಕರನು ಮರಳಿ ಮನೆಗೆ ಬರಲಿಲ್ಲ. ವಿನೋದನಿಗೆ ಚಿಂತೆಯಾಯಿತು. ಲಗುಬಗೆಯಿಂದ ವಿಟ್ಟಪ್ಪನ ಮನೆಗೆ ಹೋದನು.

ವಿಟ್ಟಪ್ಪ:– ಬನ್ನಿರಿ. ಎಂಥ ಕೆಟ್ಟ ದಿನವಿದು !

ವಿನೋದ:– ಏನಾಯಿತು ?

ವಿಟ್ಟಪ್ಪ:– ಆಗುವದೆಲ್ಲಾ ಆಯಿತು ! ಶಂಕರನು ಆಕಾಶಕ್ಕೆ ಹಾರಿದನು.

ವಿನೋದ:– ಅದು ಹೇಗೆ ?

ವಿಟ್ಟಪ್ಪ:– ಶಂಕರನು ತೋಟದಲ್ಲಿ ಆಡ್ಡಾಡುತ್ತಿದ್ದನು. ಆಗ ಒಂದು ಗಿಡಗವು ಬಂದಿತು. ಕೂಡಲೆ ಶಂಕರನನ್ನು ಕಚ್ಚಿಕೊಂಡು ಮೇಲೆ ಹಾರಿತು.

ವಿನೋದನಿಗೆ ಸಿಟ್ಟು ಬಂದಿತು. ವಿಟ್ಟಪ್ಪನ ಮೇಲೆ ದೂರು ಹೇಳಲು ಗೌಡರ ಮನೆಗೆ ಹೋದನು; ಈ ಸಂಗತಿಯನ್ನು ತಿಳಿಸಿದನು; ಗೌಡರು ವಿಟ್ಟಪ್ಪನನ್ನು ಚಾವಡಿಗೆ ಕರೆಯಿಸಿದರು.

ಗೌಡರು:– ವಿಟ್ಟಪ್ಪಾ, ಶಂಕರನನ್ನು ವಿನೋದನಿಗೆ ಕೂಡಲೆ ಒಪ್ಪಿಸು.

ವಿಟ್ಟಪ್ಪ:– ಗೌಡರೇ ! ಶಂಕರನನ್ನು ಎಲ್ಲಿಂದ ತರಲಿ ? ಗಿಡಗವು ಆತನನ್ನು ಕಚ್ಚಿಕೊಂಡು ಹೋಗಿದೆ.



ಗೌಡರು:–ಇದೆಲ್ಲಾ ಸುಳ್ಳು. ಗಿಡಗವು ಮನುಷ್ಯನನ್ನು ಕಚ್ಚಿಕೊಂಡು ಹೋಗುವದೇ? ಸುಮ್ಮನೆ ಶಂಕರನನ್ನು ಕರೆತಂದು ಒಪ್ಪಿಸು.

ವಿಟ್ಟಪ್ಪ:–ಗೌಡರೇ? ನಾನು ಹೇಳುವದು ಸುಳ್ಳಾದರೆ, ಇಲಿಗಳು ತಿಜೋರಿಯನ್ನು ತಿನ್ನುವದು ನಿಜವೇ?

ಗೌಡರು:–ಏನು? ಎರಡೂ ಮೋಜಿನ ಸಂಗತಿಗಳೇ!

ವಿಟ್ಟಪ್ಪನು ನಡೆದ ಸಂಗತಿಗಳನ್ನು ಗೌಡರಿಗೆ ತಿಳಿಸಿದನು. ವಿನೋದನ ಮೋಸವು ಹೊರಬಿದ್ದಿತು. ಗೌಡರು ನಕ್ಕರು. ವಿನೋದನಿಗೆ ಶಂಕರನನ್ನೂ, ವಿಟ್ಟಪ್ಪನಿಗೆ ತಿಜೋರಿಯನ್ನೂ ಕೊಡಿಸಿದರು.

ಅಭ್ಯಾಸನಗಳು:–

೧. ವಿಟ್ಟಪ್ಪನಿಗೆ ತಿಜೋರಿಯು ಯಾಕೆ ಸಿಗಲಿಲ್ಲ?
೨. ವಿಟ್ಟಪ್ಪನು ವಿನೋದನನ್ನು ಹೇಗೆ ಮೋಸಗೊಳಿಸಿದನು?
೩. ಗೌಡರು ಯಾಕೆ ನಕ್ಕರು?
೪. "ವಿಟ್ಟಪ್ಪನು ತಿಜೋರಿಯನ್ನು ಬೇಡಿದನು" ವಿಟ್ಟಪ್ಪನು ಏನನ್ನು ಬೇಡಿದನು? ತಿಜೋರಿಯನ್ನು ಬೇಡಿದನು. ಕ್ರಿಯಾಪದಕ್ಕೆ 'ಏನನ್ನು' ಎಂದು ಪ್ರಶ್ನೆಮಾಡಿದರೆ ಕರ್ಮಪದವು ಹೊರಡುವದು. ಈ ವಾಕ್ಯದಲ್ಲಿ 'ತಿಜೋರಿಯನ್ನು' ಕರ್ಮಪದವು.
೫. ಕೆಳಗಿನ ವಾಕ್ಯಗಳಲ್ಲಿ ಕರ್ಮಪದಗಳನ್ನು ಗುರುತಿಸಿರಿ:
(೧) ರಾಮನು ಗಿಳಿಯನ್ನು ನೋಡಿದನು. (೨) ಬೆಕ್ಕು ಇಲಿಯನ್ನು ಹಿಡಿಯಿತು. (೩) ಸಂಗನು ಪುಸ್ತಕವನ್ನು ಓದಿದನು.

# ೧೮. ಡೊಂಬರ ಆಟ



ಸಾಲೆಯ ಸಮೀಪದಲ್ಲಿ 'ಡಬ್ ಡಬ್' ಎಂದು ಡೋಲಿನ ಸಪ್ಪಳವಾಯಿತು. 'ಪೀ, ಪೀ' ಎಂದು ಸನಾದಿಯ ನಾದವೂ ಕೇಳಿಸಿತು. ಸಾಲೆಯೊಳಗಿನ ಮಕ್ಕಳು ಕಿಡಿಕಿಗಳಲ್ಲಿ ಹಣಿಕಿನೋಡಹತ್ತಿದರು. ಈಗ ಮಕ್ಕಳ ಮನಸ್ಸು ಅತ್ತ ಹರಿಯುತ್ತಿತ್ತು. ಗುರುಗಳು ಅದನ್ನು ತಿಳಿದುಕೊಂಡರು; ವರ್ಗದ ಮಂತ್ರಿಗೆ ತಿಳಿಸಿದರು. ಎಲ್ಲ ಮಕ್ಕಳೂ ಶಿಸ್ತಿನಿಂದ ಹೊರಗೆ ಬಂದರು.

ಡೊಂಬರು ಆಟಹೂಡಿದ ಸ್ಥಳಕ್ಕೆ ಅವರು ಹೋದರು. ಆಗ ಸಣ್ಣ ಸಣ್ಣ ಹುಡುಗರು ತರತರದ ಲಾಗ ಹೊಡೆಯಹತ್ತಿದರು. ಮೈ ಕೈಗಳನ್ನು ಮಣಿಸುತ್ತಿದ್ದರು. ಆ ಮೇಲೆ ದೊಡ್ಡವನೊಬ್ಬನು ಮಲಕಂಬದ ಮೇಲೆ ಕಸರತ್ತುಗಳನ್ನು ಮಾಡಹತ್ತಿದನು. ಕೊನೆಗೆ ಗಳದ ತುದಿಗೆ ಹೊಕ್ಕಳು ಹಚ್ಚಿ, ಕೈಕಾಲುಗಳನ್ನು ಚಾಚಿ, ಡಬ್ಬು ಮಲಗಿದನು. ಅಲ್ಲಿ ನೆರೆದವರು ಚಪ್ಪಾಳೆ ಹೊಡೆದರು.

ಶಂಕರ:– ಗುರುಗಳೇ, ಅವನು ಕೆಳಗೆ ಬೀಳುವದಿಲ್ಲವೇನು ?

ಗುರು:– ಇಲ್ಲ, ಅವನು ಅಷ್ಟು ರೂಢಿ ಮಾಡಿದ್ದಾನೆ. ಅವರ ಕಸರತ್ತುಗಳಲ್ಲಿ ಇದೇ ದೊಡ್ಡದು.

ಗಿರಿಜೆ:–ಗುರುಗಳೇ, ಕಸರತ್ತು ಮಾಡುವಾಗ ಡೋಲನ್ನು ಯಾಕೆ ಬಾರಿಸುವರು ?

ಗುರು:– ಕಸರತ್ತು ಮಾಡುವವನ ಲಕ್ಷವು ಅತ್ತಿತ್ತ ಹರಿಯಬಾರದು. ಅಲ್ಲದೆ ಅವನಿಗೆ ಹುರುಪು ಹುಟ್ಟಬೇಕು. ನೋಡುವವರ ಲಕ್ಷವೂ ಕಸರತ್ತುಮಾಡುವವರ ಕಡೆಗೆ ಇರಬೇಕು. ಅದಕ್ಕಾಗಿ ಅವರು ಡೋಲನ್ನು ಬಾರಿಸುವರು.

ಶಿವು:– ಅಲ್ಲಿ ನೋಡಿರಿ ! ಒಬ್ಬ ಹೆಣ್ಣುಮಗಳು ಹಗ್ಗದ ಮೇಲೆ ನಡೆಯುವಳು. ಓಹೋ ! ಒಂದೇ ಕಾಲಿನಿಂದ ನಡೆಯಹತ್ತಿದಳು. ಗುರುಗಳೇ, ಅವಳು ಬೀಳುವದಿಲ್ಲವೇನು ?

ಗುರು:– ಇಲ್ಲ, ಇಲ್ಲ ! ಆಕೆಯ ಕೈಯಲ್ಲಿ ಒಂದು ಗಳವಿದೆ. ಗಳದ ಸಹಾಯದಿಂದ ಜೋಲಿ ಹಿಡಿಯುವಳು.

ನೀಲೆ:– ಓಹೋ ! ಈಗ ಹಗ್ಗದ ಮೇಲೆ ಗಂಗಾಳವನ್ನು ಇಟ್ಟು, ಅದನ್ನು ಸರಿಸುತ್ತ ಮುಂದೆ ನಡೆಯುವಳು. ಬಹಳ ಸೋಜಿಗದ ಆಟ !

ಗುರು:– ಹೌದು ! ಇದು ಬಹಳ ಚಮತ್ಕಾರದ ಆಟ ! ಅದರಿಂದಲೇ ಇದನ್ನು ಕೊನೆಗೆ ಮಾಡುವರು.

ಮಲ್ಲ:– ಗುರುಗಳೇ, ಈ ಜನರು ಎಲ್ಲಿ ಇರುತ್ತಾರೆ ?

ಗುರು:–ಇವರು ಕಾಡುಜನರು; ಬಲು ಬಡವರು. ಇವರಿಗೆ ಮನೆ ಮಾರುಗಳಿಲ್ಲ. ಊರಿಂದೂರಿಗೆ ಅಡ್ಡಾಡುವರು. ಗುಡಿ ಗುಂಡಾರಗಳಲ್ಲಿ ಇಳಿದುಕೊಳ್ಳುವರು. ಹೀಗೆ ಆಟಗಳನ್ನು ಮಾಡಿ, ಬಂದ ಹಣದಿಂದ ಹೊಟ್ಟೆ ತುಂಬಿಕೊಳ್ಳುವರು. ಜನರು ಕೊಟ್ಟ ಹಳೆಯ ಬಟ್ಟೆಗಳನ್ನು ತೊಡುವರು.

ಅಷ್ಟರಲ್ಲಿ ಡೋಲು ಬಾರಿಸುವವನು ಹಣ ಕೂಡಿಸತೊಡಗಿದನು. ಹಣಕೊಟ್ಟವರಿಗೆ ದೇವರು ಹೆಚ್ಚು ಹೆಚ್ಚು ಕೊಡಲೆಂದು ಹರಕೆ ಕೊಡುತ್ತ ಡೋಲು ಹೊಡೆದು ಕೈಮುಗಿಯುತ್ತ ಮುಂದೆ ಸಾಗಿದನು.

ಗುರುಗಳೂ ಸಾಲೆಯ ಪರವಾಗಿ ನಾಲ್ಕಾಣೆ ಕೊಟ್ಟರು. ಮಕ್ಕಳು ಸಾಲಾಗಿ ಸಾಲೆಗೆ ನಡೆದರು. ಆ ದಿನ ಅವರ ಬಾಯಲ್ಲಿ ಡೊಂಬರ ಆಟದ ಮಾತೇ ಮಾತು.

ಅಭ್ಯಸನಗಳು:–

೧. ಮಕ್ಕಳು ಕಿಡಿಕಿಯಲ್ಲಿ ಏಕೆ ಹಣಿಕಿನೋಡುತ್ತಿದ್ದರು ?

೨. ಸಣ್ಣ ಹುಡುಗರು ಯಾವ ಕಸರತ್ತುಗಳನ್ನು ಮಾಡಿದರು ?

೩. ಅವರ ಕಸರತ್ತುಗಳಲ್ಲಿ ಯಾವದು ದೊಡ್ಡದು ?

೪. ಕೊನೆಗೆ ಮಾಡುವ ಚಮತ್ಕಾರದ ಆಟ ಯಾವದು ?

೫. ಕೆಳಗಿನ ವಾಕ್ಯಗಳಲ್ಲಿ ಕರ್ಮಪದಗಳನ್ನು ಗುರುತಿಸಿರಿ:

ಅ) ಗುರುಗಳು ಅದನ್ನು ತಿಳಿದುಕೊಂಡರು.

ಆ) ಹುಡುಗರು ಮೈಕೈಗಳನ್ನು ಮಣಿಸುತ್ತಿದ್ದರು.

ಇ) ಡೋಲನ್ನು ಯಾಕೆ ಬಾರಿಸುವರು ?

೬. ಸರಿಯಾದ ಶಬ್ದಗಳನ್ನು ಹಾಕಿ, ಕೆಳಗಿನ ವಾಕ್ಯಗಳನ್ನು ಪೂರ್ಣ ಮಾಡಿರಿ:

ಅ) ಡೊಂಬರು ——— ( ಸಿರಿವಂತರು, ವಿದ್ಯಾವಂತರು, ಬಡವರು )

ಆ) ಆ ಹೆಣ್ಣುಮಗಳು ಹಗ್ಗದ ಮೇಲೆ ——— ( ಕುಣಿಯುವಳು, ನಡೆಯುವಳು, ಜಿಗಿಯುವಳು ).

ಇ) ಡೊಂಬರ ಆಟ ——— ( ಹಗುರಾದ, ಸೋಜಿಗದ, ಬೇಸರದ ) ಆಟವು.

ಈ) ಡೊಂಬರ ಆಟ ನೋಡಿ ——— ( ನಗು, ದುಃಖ, ಆಶ್ಚರ್ಯ ) ಆಗುವದು.

೭. ನೀವು ನೋಡಿದ ಡೊಂಬರ ಆಟದ ವರ್ಣನೆಯನ್ನು ಸುಮಾರು ೧೦ ವಾಕ್ಯಗಳಲ್ಲಿ ಬರೆಯಿರಿ.

೮. ಕೆಳಗಿನ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯವನ್ನು ಮಾಡಿರಿ:

ಕಸರತ್ತು, ಚಮತ್ಕಾರ, ಗುಡಿಗುಂಡಾರ, ಜೋಲಿ ಹಿಡಿ, ಹರಕೆ.

# ೧೯. ತಿಳಿಗೇಡಿ ಎಲ್ಲವ್ವ

ಒಂದು ಊರಲ್ಲಿ ಕನಕನೆಂಬ ತಳವಾರನಿದ್ದನು. ಅವನ ಹೆಂಡತಿಯ ಹೆಸರು ಎಲ್ಲವ್ವ; ಅವರದೊಂದು ನಾಲ್ಕು ತಿಂಗಳ ಗಂಡು ಕೂಸು ಇತ್ತು. ಕನಕನು ಹೊಲಮನೆ ಮಾಡಿಕೊಂಡು ಉಂಡುಟ್ಟು ಸುಖದಿಂದ ಇದ್ದನು. ಅವನು ವಿನೋದಕ್ಕಾಗಿ ಒಂದು ಮುಂಗುಲಿಯ ಮರಿಯನ್ನು ಸಾಕಿದ್ದನು. ದಿನಕಳೆದಂತೆ ಅದು ಬೆಳೆದು ದೊಡ್ಡದಾಯಿತು. ಸಲಿಗೆಯಿಂದ ಮನೆಯವರೊಡನೆ ಚಿನ್ನಾಟ ಆಡುತ್ತಿತ್ತು. ಆಗ ಎಲ್ಲವ್ವನಿಗಂತೂ ಬಲು ಹಿಗ್ಗು.

ಒಂದು ದಿನ ಕನಕನು ರೊಟ್ಟಿಯನ್ನು ತಿಂದು, ಗಳೆ ಹೂಡಿ ಕೊಂಡು ಹೊಲಕ್ಕೆ ಹೋದನು ಎಲ್ಲವ್ವನು ಕೂಸಿಗೆ ಮೊಲೆಯುಣಿಸಿ, ತೊಟ್ಟಿಲಲ್ಲಿ ಮಲಗಿಸಿದಳು. ಕದವನ್ನು ಮುಂದೆ ಮಾಡಿ, ನೀರಿಗೆ ಹೋದಳು. ಮುಂಗುಲಿಯು ಮನೆಯಲ್ಲಿಯೇ ಮಲಗಿತ್ತು. ಮನೆಯಲ್ಲಿ ಸದ್ದೇ ಇರಲಿಲ್ಲ. ಎಲ್ಲರೂ ಹೊರಗೆ ಹೋಗಿದ್ದರು.

ಈ ಸಮಯದಲ್ಲಿ ಒಂದು ದೊಡ್ಡ ನಾಗರಹಾವು ಜಂತೆಯೊಳಗಿಂದ ಹೊರಬಿದ್ದಿತು; ತೊಟ್ಟಿಲಿನ ಹಗ್ಗದ ಗುಂಟ ಇಳಿದು, ತೋಳ ಮೇಲೆ ಬಂದಿತು. ಮುಂಗುಲಿಯು ಅದನ್ನು ಕಂಡು, ಚಟ್ಟನೆ ತೊಟ್ಟಿಲಿಗೆ ಹಾರಿತು; ಹಾವಿನ ಹೆಡೆ ಹಿಡಿದು ಕಡಿದು ಕೊಂದುಹಾಕಿತು.

ಬಳಿಕ ಮುಂಗುಲಿಯು ಉಬ್ಬಿನಿಂದ ಹೊರಗೆ ನಡೆಯಿತು. ತನ್ನನ್ನು ಸಾಕಿದ ಎಲ್ಲವ್ವನನ್ನು ಕಾಣಬೇಕೆಂದು ಹಾತೊರೆಯಿತು. ಕದದ ಸಂದಿನೊಳಗಿಂದ ಹೊರಬಿದ್ದಿತು. ಅಷ್ಟರೊಳಗೆ ಎಲ್ಲವ್ವನು ಕೊಡ ಹೊತ್ತುಕೊಂಡು ಬಾಗಿಲಿಗೆ ಬಂದಳು. ಅವಳು ಮುಂಗುಲಿಯ ಬಾಯಿಗೂ ಮೈಗೂ ಮೆತ್ತಿದ್ದ ನೆತ್ತರನ್ನು ಕಂಡಳು; ಆಗ ತನ್ನ ಕೂಸನ್ನೇ ಕೊಂದು ಮುಂಗುಲಿಯು ಓಡಿಹೋಗುತ್ತದೆಂದು ಆಕೆಯು

ತಿಳಿದಳು. ಸಿಟ್ಟಿನಿಂದ ತಲೆಯ ಮೇಲಿನ ತುಂಬಿದ ಕೊಡವನ್ನು ಅದರ ಮೇಲೆ ಅಪ್ಪಳಿಸಿದಳು. ಆದರಿಂದ ಆ ಬಡ ಪ್ರಾಣಿಯು ಅಲ್ಲಿಯೇ ಗಿಜಿಗಿಜಿಯಾಗಿ ಸತ್ತುಬಿದ್ದಿತು.

ಪಾಪ ! ಕೂಸಿನ ಜೀವವನ್ನು ಮುಂಗುಲಿಯು ಹೇಗೆ ಉಳಿಸಿತೆಂಬದು ಎಲ್ಲವ್ವನಿಗೇನು ಗೊತ್ತು ! ಎಲ್ಲವ್ವನು ಒಳಗೆ ಬಂದು ನೋಡುತ್ತಾಳೆ; ಕೂಸು ತೊಟ್ಟಿಲೊಳಗೆ ಆಡುತ್ತಿತ್ತು. ಆದರೆ ಅದರ ಸುತ್ತಲೆಲ್ಲ ರಕ್ತವು ಬಿದ್ದಿತ್ತು. ಅಲ್ಲಿ ಒಂದು ದೊಡ್ಡ ನಾಗರಹಾವು ತುಂಡುತುಂಡಾಗಿ ಬಿದ್ದಿತ್ತು. ಕೂಡಲೆ ಎಲ್ಲವ್ವನಿಗೆ ನಡೆದ ಸಂಗತಿಯೆಲ್ಲ ತಿಳಿಯಿತು. ಆಗ ಅವಳು–" ಅಯ್ಯೋ ! ಮುಂಗುಲಿಯೇ, ನೀನು ನನ್ನ ಕೂಸಿನ ಜೀವವನ್ನು ಉಳಿಸಿದೆ. ಆದರೆ ನಾನೆಂಥ ತಿಳಿಗೇಡಿ ! ತಿಳಿಯದೆ ಸಿಟ್ಟಿಗೆದ್ದು ನಿನ್ನನ್ನು ಸುಮ್ಮನೆ ಕೊಂದೆನಲ್ಲ !" ಎಂದು ಬೋರಾಡಿ ಅಳಹತ್ತಿದಳು.

ಅಭ್ಯಸನಗಳು:–

೧. ಹಾವನ್ನು ನೋಡಿ ಮುಂಗುಲಿಯು ಏನು ಮಾಡಿತು ?

೨. ಎಲ್ಲವ್ವನು ಮುಂಗುಲಿಯನ್ನು ಯಾಕೆ ಕೊಂದಳು ?

೩. ಮುಂಗುಲಿಯು ಯಾರ ಜೀವವನ್ನು ಉಳಿಸಿತು ?

೪. ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ಎಲ್ಲವ್ವನು ಕೂಸಿಗೆ —— ತೊಟ್ಟಿಲಲ್ಲಿ ——.

ಆ) ಮುಂಗುಲಿಯು ಅದನ್ನು ಕಂಡು —— —— ಹಾರಿತು.

ಇ) ಆ ಬಡಪ್ರಾಣಿಯು ಅಲ್ಲಿಯೇ —— ಸತ್ತುಬಿದ್ದಿತು.

ಈ) ಅಲ್ಲಿ ಒಂದು ದೊಡ್ಡ —— ತುಂಡುತುಂಡಾಗಿ ——.

೫. ಕೆಳಗಿನ ವಾಕ್ಯಗಳಲ್ಲಿ ಕರ್ಮಪದಗಳನ್ನು ತುಂಬಿರಿ:

ಅ) ಮುಂಗುಲಿಯು ತುಂಡುತುಂಡಾಗಿ —— ಕಡಿದು ಕೊಂದಿತು.

ಆ) ಎಲ್ಲವ್ವನು ತುಂಬಿದ —— ಅದರ ಮೇಲೆ ಅಪ್ಪಳಿಸಿದಳು.

ಇ) ಮುಂಗುಲಿಯು ಎಲ್ಲವ್ವನ ಕೂಸಿನ —— ಉಳಿಸಿತು.

# ೨೦. ಸೀಗೆ ಹುಣ್ಣಿವೆ



ಅಂದು ಸೀಗೆಹುಣ್ಣಿವೆ. ಚೆನ್ನನು ತನ್ನ ಗೆಳೆಯರಿಗೆ ಊಟಃ ಹೇಳಿದ್ದನು. ಕಮಲೆ ಚೆನ್ನನ ಅಕ್ಕ. ಆಕೆಯೂ ತನ್ನ ಗೆಳತಿಯರಿಗೆ ಊಟಕ್ಕೆ ಹೇಳಿದ್ದಳು. ಅಂದು ಹೊಲದಲ್ಲಿ ಪಂತಿ. ಗಂಗವ್ವ ಕಮಲೆಯ ತಾಯಿ. ಆಕೆಯು ಅಡಿಗೆಯ ಕೆಲಸದಲ್ಲಿ ತೊಡಗಿದ್ದಳು. ಹಬ್ಬದ ಅಡಿಗೆಯನ್ನು ಮಾಡಲು ಆಕೆಗೆ ಬಲು ಉಬ್ಬು. ಚೆನ್ನನು ಗೆಳೆಯರನ್ನು ಕರೆಯಲು ಹೊರಗೆ ಹೋದನು. ಕಮಲೆಯು ಗೆಳತಿಯರನ್ನು ಕರೆಯಲು ಹೊರಗೆ ಹೋದಳು. ಇತ್ತ ಗಂಗವ್ವ ಅಡಿಗೆ ಸಜ್ಜುಮಾಡಿದಳು. ಸವಿಸವಿ ತಿನಸುಗಳನ್ನು ಸಿದ್ಧಗೊಳಿಸಿದಳು. ಅಡಿಗೆಯ ಮನೆಯು ಗಮಗಮಿಸುತ್ತಿತ್ತು.

ಅಷ್ಟರಲ್ಲಿ ಕಮಲೆಯು ಗೆಳತಿಯರನ್ನು ಕರೆದುಕೊಂಡು ಬಂದಳು. ಚೆನ್ನನು ಗೆಳೆಯರನ್ನು ಕರೆದುಕೊಂಡು ಬಂದನು. ಗಂಗವ್ವನ ಬಳಗ ಬಹಳ. ಎಲ್ಲರೂ ಹೊಲಕ್ಕೆ ಹೊರಡಲು ಸಿದ್ಧರಾದರು. ಕೆಲವರು ಬಂಡಿಯಲ್ಲಿ ಕುಳಿತು ಹೋದರು; ಕೆಲವರು ಕಾಲುನಡಿಗೆಯಿಂದ ಹೋದರು.

ಕಮಲೆಯು ಪೂಜೆಯ ಸಾಮಾನುಗಳನ್ನು ಸಜ್ಜುಮಾಡಿದಳು. ಚೆನ್ನನು ಐದು ಸಣ್ಣ ಕಲ್ಲುಗಳನ್ನು ತಂದನು. ಅವುಗಳಿಗೆ ಸುಣ್ಣ ಕೆಮ್ಮಣ್ಣು ಬಳಿದು ಪಾಂಡವರನ್ನು ಮಾಡಿದನು. ಕಮಲೆಯು ಪಾಂಡವರ ಪೂಜೆಮಾಡಿದಳು. ಎಡೆ ತೋರಿಸಿದಳು. ಚೆನ್ನನು ಹೊಲದಲ್ಲಿ ಅಡ್ಡಾಡಿ, ಚೆರಗ ಚೆಲ್ಲಿದನು. ಬಳಿಕ ಎಲ್ಲರೂ ಪಂತಿಗೆ ಕುಳಿತರು. ಗಂಗವ್ವನು ಎಲ್ಲರಿಗೂ ಎಲೆಗಳನ್ನು ಕೊಟ್ಟು, ಎಡೆಮಾಡಲು ಆರಂಭಿಸಿದಳು. ಸಜ್ಜೆಯ ರೊಟ್ಟಿ, ತುಂಬುಗಾಯಿ ಪಲ್ಯ, ಕೆನೆಮೊಸರು, ಬೆಣ್ಣೆ, ತರತರದ ಹಿಂಡಿ, ಪಚಡಿ, ಎಳ್ಳ ಹೋಳಿಗೆ, ಕಡಬು, ಹಪ್ಪಳ, ಸಂಡಿಗೆ ಮುಂತಾದ ಸಾಮಾನುಗಳನ್ನು ಎಲೆತುಂಬ ನೀಡಿದಳು. ಹೊಲದಲ್ಲಿ ಪಂತಿ; ರುಚಿಕಟ್ಟಾದ ಊಟ! ಕೇಳುವದೇನು? ಎಲ್ಲರೂ ಮನದಣಿಯ ಊಟಮಾಡಿದರು.

ಹೊಲದಲ್ಲಿ ಎದೆಯುದ್ದ ಜೋಳದ ಬೆಳೆ ನಿಂತಿತ್ತು; ಹಚ್ಚಗೆ ಹಸಿರು ಮುರಿಯುತ್ತಿತ್ತು. ಮುಂದಿನ ಸಾಲುಗಳಲ್ಲಿ ವಾಲಿಯ ಹೂಗಳು ಹೊಳೆಯುತ್ತಿದ್ದವು. ಇತ್ತ ಸವಿಯೂಟ; ಅತ್ತ ಸೊಗಸಿನ ನೋಟ! ಇತ್ತ ಕಣ್ಣಿಗೆ ಹಬ್ಬ, ಅತ್ತ ಮನಸ್ಸಿಗೆ ಉಬ್ಬು! ಅವರೆಲ್ಲರಿಗೂ ಉಬ್ಬಿನ ಹಬ್ಬ. ಗಂಗವ್ವನಿಗೆ ಹಿಗ್ಗಿನ ಸುಗ್ಗಿ.

ಊಟವಾದ ಮೇಲೆ ಹಿರಿಯರು ಮಾತನಾಡುತ್ತ ನೆರಳಲ್ಲಿ ಕುಳಿತರು. ಕಮಲೆಯ ಗೆಳತಿಯರು ಹಾಡುತ್ತ ಕುಳಿತರು. ಚೆನ್ನನ ಗೆಳೆಯರು ಹೊಲವನ್ನು ಅಡ್ಡಾಡಿ ನೋಡಹತ್ತಿದರು. ಸಂಜೆಗೆ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ನಡೆದರು.

ಅಭ್ಯಸನಗಳು:—

೧. ಪಾಂಡವರ ಪೂಜೆಯನ್ನು ಯಾರು ಮಾಡಿದರು?
೨. ಅಂದಿನ ಊಟವು ಎಲ್ಲರಿಗೂ ಯಾಕೆ ರುಚಿಕಟ್ಟಾಯಿತ್ತು?
೩. ಹೊಲದಲ್ಲಿ ಯಾವ ಬೆಳೆಗಳಿದ್ದವು?
೪. ಪಂತಿಯ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಿರಿ
೫. ಮೇಲಿನ ಪ್ರಶ್ನೆಗಳಲ್ಲಿಯ ಕರ್ಮಪದಗಳನ್ನು ಗುರುತಿಸಿರಿ.

# ೨೧. ಆಕಳೆ ಕಥೆ



ಭಾಗ ೧

ಪುಣ್ಯಕೋಟಿ ಎಂಬ ಗೋವು
ತನ್ನ ಕಂದನ ನೆನೆದುಕೊಂಡು
ಮುನ್ನ ಹಾಲನು ಕೊಡುವೆನೆನುತ
ಚೆನ್ನಾಗಿ ತಾ ಬರುತಿರೆ. ||೧||

ಇಂದೆನಗೆ ಆಹಾರ ಸಿಕ್ಕಿತು
ಎಂದು ಬೇಗನೆ ದುಷ್ಟವ್ಯಾಘ್ರನು
ಬಂದು ಬಳಸಿ ಅಡ್ಡಗಟ್ಟಿ
ನಿಂದನಾ ಹುಲಿರಾಯನು. ||೨||

ಒಂದು ಬಿನ್ನಹ ಹುಲಿಯೆ, ಕೇಳು
ಕಂದನಿರುವನು ದೊಡ್ಡಿಯೊಳಗೆ
ಒಂದು ನಿಮಿಷದಿ ಮೊಲೆಯ ಕೊಟ್ಟು
ಬಂದು ಸೇರುವೆನಿಲ್ಲಿಗೆ. ||೩||

ಕೊಂದು ತಿನ್ನುವೆನೆಂಬ ಹುಲಿಗೆ
ಚೆಂದದಿಂದ ಭಾಷೆಯಿತ್ತು
ಕಂದ ನಿನ್ನನು ನೋಡಿಹೋಗುವೆ
ನೆಂದು ಬಂದೆನು ದೊಡ್ಡಿಗೆ. || ೪ ||

ಅಮ್ಮ ನೀನು ಸಾಯಲೇಕೌ ?
ನಮ್ಮ ತಬ್ಬಲಿ ಮಾಡಲೇಕೌ ?
ಸುಮ್ಮನಿಲ್ಲಿಯೆ ನಿಲ್ಲೆನುತ್ತ
ಅಮ್ಮನಿಗೆ ಕರು ಹೇಳಿತು. || ೫ ||

ಕೊಟ್ಟ ಭಾಷೆಗೆ ತಪ್ಪಲಾರೆ
ಕೆಟ್ಟ ಯೋಚನೆ ಮಾಡಲಾರೆ
ನಿಷ್ಠೆಯಿಂದಲಿ ಪೋಪೆನಲ್ಲಿಗೆ
ಕಟ್ಟ ಕಡೆಗಿದು ಖಂಡಿತ. || ೬ ||

ಆರ ಮೊಲೆಯನು ಕುಡಿಯಲಮ್ಮ ?
ಆರ ಸೇರಿ ಬದುಕಲಮ್ಮ ?
ಆರ ಬಳಿಯಲಿ ಮಲಗಲಮ್ಮ ?
ಆರು ನನಗೆ ಹಿತವಹರು ? || ೭ ||

ಅಭ್ಯಸನಗಳು:—

೧. ಗೋವು ತನ್ನ ಕಂದನ ಕಡೆಗೆ ಏಕೆ ಬರುತ್ತಿತ್ತು ?
೨. ಆಕಳನ್ನು ನೋಡಿ ಹುಲಿಯು ಏನು ಮಾಡಿತು ?
೩. ಆಗ ಆಕಳು ಹುಲಿಗೆ ಏನು ಹೇಳಿತು ?
೪. ದೊಡ್ಡಿಗೆ ಹೋದ ಮೇಲೆ ತನ್ನ ಕರುವಿಗೆ ಆಕಳು ಏನು ಹೇಳಿತು ?
೫. ಆಗ ಕರುವು ಆಕಳಿಗೆ ಏನು ಅಂದಿತು ?
೬. ಆಕಳು ಕರುವಿಗೆ ಯಾವ ಬುದ್ಧಿಯ ಮಾತುಗಳನ್ನು ಹೇಳಿತು ?
೭. ಆಗ ಕರುವು ತಾಯಿಗೆ ಏನು ಅನ್ನುತ್ತದೆ ?

# ೨೨. ಆಶಬುರುಕ ಮಂಗ

ಒಂದು ಅಡವಿಯಲ್ಲಿ ಒಮ್ಮೆ ಒಬ್ಬ ಅರಸನ ದಂಡು ಬೀಡುಬಿಟ್ಟಿತ್ತು. ಆ ಅಡವಿಯಲ್ಲಿ ಮಂಗಗಳ ದೊಡ್ಡ ಹಿಂಡು ಇತ್ತು. ಅರಸನ ದಂಡಿನೊಳಗೆ ಆನೆ ಕುದುರೆಗಳನ್ನು ನೋಡಿ, ಮಂಗಗಳಿಗೆ ಬಹಳ ಸೋಜಿಗವಾಯಿತು.



ಒಂದು ಮಂಗವು ಒಂದು ಆನೆಯ ಸಮೀಪಕ್ಕೆ ಹೋಯಿತು. ಆನೆಯು ಆ ಮಂಗನನ್ನು ಸೊಂಡೆಯಿಂದ ಹಿಡಿದು ಚಿಮ್ಮಿತು. ಮಂಗವು ಗಾಬರಿಯಾಗಿ ಹಲ್ಲು ಕಿರಿಯುತ್ತ ಓಡಿತು. ಮತ್ತೊಂದು ಮಂಗವು ಒಂದು ಕುದುರೆಯ ಹತ್ತಿರ ಹೋಯಿತು. ಕುದುರೆಯು ಅದನ್ನು ಹಿಂಗಾಲಿನಿಂದ ಒದೆಯಿತು. ಮಂಗವು 'ಕಿರ್ ಕಿರ್' ಅನ್ನುತ್ತ ಸಮೀಪದ ಗಿಡಕ್ಕೆ ಜಿಗಿಯಿತು. ಇನ್ನೊಂದು ಮಂಗವು ಒಂದು ಬಂಡಿಯ ಮೇಲೆ ಏರಿ ಕುಳಿತಿತು. ಅತ್ತಿತ್ತ ನೋಡಹತ್ತಿತು. ಒಬ್ಬ ಕಾವಲುಗಾರನು ಬಡಿಗೆಯನ್ನು ಬೀಸಿ ಆ ಮಂಗನ ಮೇಲೆ ಎಸೆದನು. ಅದು ಅದರ ಟೊಂಕಕ್ಕೆ ಬಡಿಯಿತು. ಮಂಗವು ಗಾಬರಿಯಾಗಿ ಕೆಳಗೆ ಜಿಗಿದು ಓಡಿಹೋಯಿತು. ಬೇರೊಂದು ಮಂಗವು ಕುದುರೆಯ ತೋಬರಿಯಲ್ಲಿ ಕೈಹಾಕಿತು. ಕೈತುಂಬ ಕಡಲೆಯ ಕಾಳುಗಳು ಬಂದವು. ಕಡಲೆಯ ಮೇಲೆ ಮಂಗನಿಗೆ ಬಹಳ ಜೀವ. ಮಂಗವು



ಕಡಲೆಯ ಕಾಳುಗಳನ್ನು ಗಪಗಪನೆ ತಿನ್ನಹತ್ತಿತು. ಅದನ್ನು ಕುದುರೆಯ ಕಾವಲುಗಾರನು ದೂರದಿಂದ ನೋಡಿದನು; ಮತ್ತು ಮಂಗವನ್ನು ಹೊಡೆಯಲು ಓಡಿಬಂದನು. ಅವನನ್ನು ನೋಡಿ ಮಂಗವು ಅವಸರದಿಂದ ಕಡಲೆಯ ಕಾಳುಗಳನ್ನು ಬಾಯಿತುಂಬ ತುಂಬಿಕೊಂಡಿತು; ಮತ್ತು ಕೈತುಂಬ ಕಡಲೆಯ ಕಾಳುಗಳನ್ನು ಹಿಡಿದುಕೊಂಡು, ಟಣ್ಣನೆ ಸಮೀಪದ ಗಿಡಕ್ಕೆ ಜಿಗಿಯಿತು.

ಗಿಡದ ಮೇಲೆ ಕುಳಿತುಕೊಂಡು ಮಂಗವು ಕಡಲೆಯ ಕಾಳುಗಳನ್ನು ತಿನ್ನಹತ್ತಿತು. ಬಾಯಿಯೊಳಗಿನ ಕಾಳುಗಳನ್ನು ತಿನ್ನುವಾಗ ಕೈಯೊಳಗಿನ ಸಣ್ಣದೊಂದು ಕಾಳು ಕೆಳಗೆ ಬಿದ್ದಿತು. ಆಗ ಮಂಗವು- "ಅಯ್ಯೋ! ಒಂದು ಕಾಳು ಬಿದ್ದಿತಲ್ಲಾ! ನನ್ನ ಹತ್ತಿರ ಎಷ್ಟೋ ಕಡಲೆಯ ಕಾಳುಗಳು ಅವೆ. ಆದರೂ ಈಗ ಬಿದ್ದುದನ್ನು ಯಾಕೆ ಕಳೆದುಕೊಳ್ಳಬೇಕು?" ಎಂದು, ಆಲೋಚಿಸಿತು. ಕೈಯಲ್ಲಿಯ ಕಾಳುಗಳನ್ನು ಗಿಡದ ಹೊದರಿನಲ್ಲಿ ಇಟ್ಟಿತು. ಗಿಡ ಇಳಿದು, ಬಿದ್ದ ಕಾಳನ್ನು ಹುಡುಕಹತ್ತಿತು. ಮಂಗವು ಹುಲ್ಲನ್ನು ಅತ್ತ ಇತ್ತ ಸರಿಸಿತು. ಸಣ್ಣ ಸಣ್ಣ ಕಲ್ಲುಗಳನ್ನು ಎತ್ತಿ ಎತ್ತಿ, ಕಣ್ಣು ಪಿಳಿಕಿಸುತ್ತ ನೋಡಿತು. ಕಾಳು ಎಲ್ಲಿಯೂ ಸಿಗಲಿಲ್ಲ. ಕಾಳು ಸಿಗಲಿಲ್ಲವೆಂದು

ಮಂಗವು ಮರುಗಿತು; ಮತ್ತೆ ಗಿಡದ ಮೇಲೆ ಹಾರಿತು. ತಾನು ಇಟ್ಟ ಕಾಳುಗಳನ್ನು ತೆಗೆದುಕೊಳ್ಳಲು ಹೊದರಿನಲ್ಲಿ ಹಣಿಕಿಹಾಕಿತು. ಅಲ್ಲಿ ಒಂದು ಕಾಳೂ ಇರಲಿಲ್ಲ. ಮಂಗವು ಮತ್ತಷ್ಟು ಮಿಡುಕಿತು.

ಆ ಮಂಗವು ಹೊದರಿನಲ್ಲಿ ಕಾಳು ಇಟ್ಟದ್ದನ್ನು ಉಳಿದ ಮಂಗಗಳು ನೋಡಿದ್ದವು. ಬಿದ್ದ ಕಾಳನ್ನು ಹುಡುಕಲು ಅದು ಕೆಳಗೆ ಹೋದಾಗ, ಅವು ಹೊದರಿನಲ್ಲಿಯ ಕಾಳುಗಳನ್ನು ಕದ್ದು ಒಯ್ದಿದ್ದವು. ಆಗ ಆ ಮಂಗವು ಅಂದಿತು:– "ನನ್ನ ಕೈತುಂಬ ಕಾಳುಗಳಿದ್ದವು. ಒಂದು ಕಾಳನ್ನು ಹುಡುಕಲಿಕ್ಕೆ ಹೋಗಿ ಈಗ ಅವನ್ನೆಲ್ಲ ಕಳೆದುಕೊಂಡೆನಲ್ಲ!" ಮಂಗವು ಹೀಗೆ ಹಳಹಳಿಸುತ್ತ ಮುಖ ಸಪ್ಪಗೆ ಮಾಡಿಕೊಂಡು ಗಿಡದ ಟೊಂಗೆಯ ಮೇಲೆ ಕುಳಿತುಕೊಂಡಿತು. ಉಳಿದ ಮಂಗಗಳು ಕಡಲೆಯ ಕಾಳುಗಳನ್ನು ತಿನ್ನುತ್ತ ಟೊಂಗೆಯಿಂದ ಟೊಂಗೆಗೆ ಹಾರಾಡಹತ್ತಿದವು; ಮತ್ತು–

"ಹಿಡಿಹಿಡಿ ಕಾಳನು ಹೊದರಿನಲಿಟ್ಟು
ಬಿಡಿ ಕಾಳೊಂದನು ಹುಡುಕಿದೆಯಲ್ಲ!
ಬಿಡಿ ಕಾಳೊಂದರ ಆಸೆಗೆ ನೀನು
ಹಿಡಿ ಕಾಳೆಲ್ಲವ ನೀಗಿದೆಯಲ್ಲ!!" ಎಂದು ಹಾಡಹತ್ತಿದವು.

ಅಭ್ಯಸನಗಳು:–

೧. ಮಂಗಗಳಿಗೆ ಏಕೆ ಸೋಜಿಗವಾಯಿತು?
೨. ಒಂದು ಮಂಗವು 'ಕಿರ್ ಕಿರ್' ಎಂದು ಅನ್ನುತ್ತ ಏಕೆ ಓಡಿತು?
೩. ಮಂಗವು ಕಡಲೆಯ ಕಾಳುಗಳನ್ನು ಎಲ್ಲಿಂದ ದೊರಕಿಸಿತು?
೪. ಆ ಮಂಗವು ಏನನ್ನು ಹುಡುಕಿತು?
೫. ಉಳಿದ ಮಂಗಗಳು ಏನೆಂದು ಹಾಡಿದವು?
೬. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ:
   ಅ) ಒಂದು ——— ಅರಸನ ದಂಡು ———.
   ಆ) ಕುದುರೆಯು ಅದನ್ನು ——— ಒದೆಯಿತು.
   ಇ) ಎರಡೂ ——— ಕಡಲೆಯ ಕಾಳುಗಳನ್ನು ಹಿಡಿದುಕೊಂಡಿತು.
   ಈ) ——— ಸಿಗಲಿಲ್ಲವೆಂದು ಮಂಗವು ———.

# ೨೩. ಗಾಂಧೀಜಿಯವರ ಸರಳತನ



ಮೋತಿಹಾರಿ ಎಂಬದೊಂದು ಚಿಕ್ಕ ಹಳ್ಳಿ. ಅದು ಬಿಹಾರ ಪ್ರಾಂತದಲ್ಲಿ ಅದೆ. ಗಾಂಧಿಯವರಿಗೆ ಅಲ್ಲಿಗೆ ಹೋಗಬೇಕಾಗಿತ್ತು. ಅದಕ್ಕಾಗಿ ಅವರು ಉಗಿಬಂಡಿಯಲ್ಲಿ ಕುಳಿತರು. ಅವರು ಯಾವಾಗಲೂ ಮೂರನೆಯ ತರಗತಿಯ ಡಬ್ಬಿಯಲ್ಲಿಯೇ ಪ್ರವಾಸ ಮಾಡುತ್ತಿದ್ದರು. ಆ ದಿನ ಗಾಂಧಿಯವರಿಗೆ ಸ್ವಲ್ಪ ಆಯಾಸವಾಗಿತ್ತು. ಅದರಿಂದ ಸ್ವಲ್ಪ ಕಾಲು ಚಾಚಿ ಒರಗಿದ್ದರು.

ಅಂದು ಪ್ರತಿಯೊಂದು ನಿಲ್ದಾಣದಲ್ಲಿ ಇಳಿಯುವ ಜನರು ಕಡಿಮೆ; ಹತ್ತುವವರೇ ಬಹಳ. ಎಲ್ಲರಿಗೂ ಗಾಂಧಿಯವರನ್ನು ನೋಡಬೇಕೆಂಬ ಆಶೆ. ಆದ್ದರಿಂದ ಎಲ್ಲ ಡಬ್ಬಿಗಳಲ್ಲಿ ಜನರು ತುಂಬಿದ್ದರು. ನಿಂತುಕೊಂಡವರೇ ಬಹಳ. ಉಗಿಬಂಡಿಯು ಒಂದು ನಿಲ್ದಾಣದಲ್ಲಿ ವಾಡಿಕೆಯಂತೆ ನಿಂತಿತು. ಜನರು ಪ್ರತಿಯೊಂದು ಡಬ್ಬಿಯಲ್ಲಿ ನುಗ್ಗತೊಡಗಿದರು. ಆದರೆ ಒಬ್ಬ ಹಳ್ಳಿಯ ಒಕ್ಕಲಿಗನು ಮಾತ್ರ ಎಲ್ಲ ಡಬ್ಬಿಗಳಲ್ಲಿ ಹಣಿಕಿನೋಡಿದನು. ಎಲ್ಲಿಯೂ ಆತನಿಗೆ

ಸ್ಥಳ ಸಿಕ್ಕಲಿಲ್ಲ. ಗಾಂಧಿಯವರು ಕುಳಿತ ಡಬ್ಬಿಯಲ್ಲಿ ಇಂಬು ಕಾಣಿಸಿತು. ಅವನು ಅದರೊಳಗೇ ನುಗ್ಗಿದನು; ಅತ್ತ ಇತ್ತ ನೋಡಿದನು. ಒಬ್ಬರು ಮಾತ್ರ ಕಾಲುಚಾಚಿ ಒರಗಿಕೊಂಡದ್ದನ್ನು ಕಂಡನು. ಪಾಪ! ಒಕ್ಕಲಿಗನು ಗಾಂಧಿಯವರನ್ನು ಎಂದೂ ನೋಡಿರಲಿಲ್ಲ. ಒರಗಿಕೊಂಡವರು ಗಾಂಧಿಯವರೆಂದು ಅವನಿಗೇನು ಗೊತ್ತು? ಕೂಡಲೆ ಅವರ ಹತ್ತಿರ ಹೋದನು. ಅವರ ಕಾಲನ್ನು ತಟ್ಟಿ, "ಏಳಯ್ಯಾ! ಬಂಡಿಯಲ್ಲಿ ಎಷ್ಟು ಗದ್ದಲ! ಜನರು ನಿಂತಿದ್ದಾರೆ. ನೀನು ಸ್ವಸ್ಥ ಮಲಗಿರುವೆಯಲ್ಲ! ಸಮನಾಗಿ ಕುಳಿತುಕೋ" ಎಂದು ಗಾಂಧಿಯವರನ್ನು ಎಬ್ಬಿಸಿದನು. "ಅವರನ್ನು ಎಬ್ಬಿಸಬೇಡ" ಎಂದು ಹೇಳುವ ಧೈರ್ಯ ಯಾರಿಗೂ ಆಗಲಿಲ್ಲ. ಗಾಂಧಿಯವರು ಎದ್ದು ಕುಳಿತರು. ಒಕ್ಕಲಿಗನಿಗೆ ತಮ್ಮ ಹತ್ತಿರ ಸ್ಥಳಮಾಡಿಕೊಟ್ಟರು.

ಒಕ್ಕಲಿಗನು ಸುಖದಿಂದ ಕುಳಿತನು. ಮೋತಿಹಾರಿಯಲ್ಲಿ ಗಾಂಧಿಯವರನ್ನು ಕಣ್ತುಂಬ ನೋಡುವೆನೆಂದು ಹಿರಿಹಿರಿ ಹಿಗ್ಗಿದನು. ಆದರೆ ತಾನು ಗಾಂಧಿಯವರ ಪಕ್ಕದಲ್ಲಿ ಕುಳಿತಿರುವೆನೆಂಬ ಅರಿವು ಮಾತ್ರ ಆತನಿಗಿಲ್ಲ. ಗಾಂಧಿಯವರ ಮೋರೆ ಸಪ್ಪಗೆ. ಇಬ್ಬರ ಸ್ಥಳ ಹಿಡಿದಿದ್ದೆನೆಂದು ಅವರಿಗೆ ಅಸಮಾಧಾನ. ಒಬ್ಬನು ಸಾಮಾನ್ಯ ಒಕ್ಕಲಿಗ. ಆತನ ಭುಜಕ್ಕೆ ಭುಜ ಹಚ್ಚಿ ಕುಳಿತವರು ಜಗತ್ತಿಗೆ ಪೂಜ್ಯರಾದ ಗಾಂಧೀಜಿ. ಗಾಂಧಿಯವರು ಒಬ್ಬ ಒಕ್ಕಲಿಗನ ಹತ್ತಿರ ಕುಳಿತದ್ದಕ್ಕೆ ಅಲ್ಲಿದ್ದ ಇತರರಿಗೆ ಸಂಕೋಚ. ಗಾಂಧಿಯವರಿಗೆ ಸಂಕೋಚವಿಲ್ಲ; ಹರುಷ.

ಉಗಿಬಂಡಿ ಮೋತಿಹಾರಿ ನಿಲ್ದಾಣಕ್ಕೆ ಬಂದಿತು. ಎಲ್ಲರೂ ಬಂಡಿಯಿಂದ ಇಳಿಯತೊಡಗಿದರು. ಗಾಂಧಿಯವರನ್ನು ಕಾಣಲು ಸಾವಿರಾರು ಜನರು ನೆರೆದಿದ್ದರು. ಗಾಂಧಿಯವರು ಇಳಿಯುವ ಮುಂದೆ ದೊಡ್ಡ ದೊಡ್ಡ ಜನರು ನಮಸ್ಕಾರ ಮಾಡತೊಡಗಿದರು. ಈಗ ತಾನು ಕಾಲುತಟ್ಟಿ ಎಬ್ಬಿಸಿದವರೇ ಗಾಂಧಿಯವರು ಎಂಬುದು ಒಕ್ಕಲಿಗನಿಗೆ ಚೆನ್ನಾಗಿ ತಿಳಿಯಿತು. "ಸುಖವಾಗಿ ಒರಗಿಕೊಂಡಿದ್ದ

ಗಾಂಧಿಯವರನ್ನು ನಾನು ಎಬ್ಬಿಸಿ ಕೂಡ್ರಿಸಿದೆನಲ್ಲ !" ಎಂದು ಅವನಿಗೆ ಬಹಳ ದುಃಖವಾಯಿತು. ಅವನು ಗಾಂಧಿಯವರ ಪಾದಕ್ಕೆ ಎರಗಿದನು; ಅವರ ಕ್ಷಮೆ ಬೇಡಿದನು. ಗಾಂಧಿಯವರು ಆ ಒಕ್ಕಲಿಗನನ್ನು ಸಂತೈಸಿದರು. ಬಡವರೂ ಒಕ್ಕಲಿಗರೂ ಗಾಂಧಿಯವರ ಪ್ರಾಣ.

ಅಭ್ಯಸನಗಳು:–

೧. ಒಮ್ಮೆ ಗಾಂಧಿಯವರು ಎಲ್ಲಿಗೆ ಹೊರಟಿದ್ದರು ?

೨. ಉಗಿಬಂಡಿಯಲ್ಲಿ ಅಂದು ಏಕೆ ಗದ್ದಲವಿದ್ದಿತು ?

೩. ಗಾಂಧಿಯವರ ಮೋರೆ ಯಾಕೆ ಸಪ್ಪಗಾಯಿತು ?

೪. ಆ ಒಕ್ಕಲಿಗನು ಗಾಂಧಿಯವರಿಗೆ ಕ್ಷಮೆ ಯಾಕೆ ಬೇಡಿದನು ?

೫. ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ಆ ದಿನ ಗಾಂಧೀಜಿಗೆ ಸ್ವಲ್ಪ ——— ಆಗಿತ್ತು.

ಆ) ಪ್ರತಿಯೊಂದು ——— ದಲ್ಲಿ ಇಳಿಯುವ ಜನರು ——— ಹತ್ತುವವರೇ ———.

ಇ) ಒರಗಿಕೊಂಡವರು ——— ಎಂದು ಅವನಿಗೇನು ——— ?

ಈ) ಇಬ್ಬರ ಸ್ಥಳ ಹಿಡಿದೆನೆಂದು ಅವರಿಗೆ ——— .

೬. ಕೆಳಗಿನ ಶಬ್ದಗಳ ಅರ್ಥ ಹೇಳಿರಿ:

ಆಯಾಸ, ನಿಲ್ದಾಣ, ಒರಗು, ಎರಗು, ಸಂತೈಸು.

೭. ಹೊಂದಿಸಿ ಓದಿರಿ:

| | |
|---|---|
| ಉಗಿಬಂಡಿ ಅಥವಾ ಮೋಟಾರು ನಿಲ್ಲುವ ಸ್ಥಳ | ಅಂಚೆಯ ಮನೆ |
| ಟಪಾಲು ಸಿಗುವ ಮನೆ | ಮುಖ |
| ನದಿ ಸಮುದ್ರಕ್ಕೆ ಕೂಡುವ ಸ್ಥಳ | ನಿಲ್ದಾಣ |

೮. ಕೆಳಗಿನ ವಾಕ್ಯಗಳಲ್ಲಿ ಕರ್ತೃ, ಕರ್ಮ, ಕ್ರಿಯಾಪದಗಳನ್ನು ಗುರುತಿಸಿರಿ:

ಅ) ಗಾಂಧಿಯವರು ಉಗಿಬಂಡಿಯಲ್ಲಿ ಕುಳಿತಿದ್ದರು.

ಆ) ಒಕ್ಕಲಿಗನು ಗಾಂಧಿಯವರನ್ನು ಎಂದೂ ನೋಡಿರಲಿಲ್ಲ.

ಇ) ಗಾಂಧಿಯವರು ಆ ಒಕ್ಕಲಿಗನನ್ನು ಸಂತೈಸಿದರು.

೯. ಕೆಳಗೆ ಹೇಳಿದಂತೆ ಮಾಡಿರಿ:

ಕಾಲು ಚಾಚು, ಕೈ ಬೀಸು, ಕಣ್ಣು ಮಿಳಿಕಿಸು, ಎದೆ ಉಬ್ಬಿಸು, ಬೆನ್ನು ಚಪ್ಪರಿಸು, ಕಿವಿ ಹಿಂಡು, ಮೂಗು ಮುರಿ, ಚಪ್ಪಾಳೆ ಹಾಕು.

## ೨೪. ದೀನರ ಸೇವೆ



ಸಮಗಾರ ಭರಮ ಬಹಳ ದಯಾಳು. ಮನೆಯ ಪಡಸಾಲೆಯಲ್ಲಿ ಆತನ ಕೆರವಿನ ಅಂಗಡಿ. ಅದರಲ್ಲಿಯೇ ಒಂದು ಮಗ್ಗಲು ಕುಳಿತು ಕೆರವುಗಳನ್ನು ಹೊಲಿಯುವನು; ಬಂದದ್ದರಲ್ಲಿ ಸಮಾಧಾನದಿಂದ ಬಾಳುವೆಮಾಡುವನು. ಬಡಬಗ್ಗರನ್ನು ಕಂಡರೆ ಅವನಿಗೆ ಬಹಳ ಕನಿಕರ. ತನ್ನ ಕೈಲಾದಷ್ಟು ಅವರಿಗೆ ಸಹಾಯ ಮಾಡುವನು. ಭರಮನಿಗೆ ಧೇವರ ಮೇಲೆ ಭಕ್ತಿ ಬಹಳ. ರಾತ್ರಿ ಮಲಗುವಾಗ ತಪ್ಪದೆ ದೇವರ ಭಜನೆಮಾಡುವನು.

ಒಂದು ದಿನ ಭರಮನು ದಿನದಂತೆ ದೇವರ ಭಜನೆಮಾಡಿ ಮಲಗಿದನು. ಅವನಿಗೆ ಒಂದು ಕನಸು ಬಿತ್ತು. ಕನಸಿನಲ್ಲಿ ದೇವರು ಹತ್ತಿರ ಬಂದು ನಿಂತು, "ಭರಮಾ, ನಾಳೆ ನಿನ್ನ ಮನೆಗೆ ಬರುವೆ" ಎಂದು ಹೇಳಿದಂತಾಯಿತು. ಭರಮನು ತಟ್ಟನೆ ಎದ್ದು ಕುಳಿತು ಸುತ್ತಲೂ ನೋಡಿದನು; ಯಾರೂ ಕಾಣಿಸಲಿಲ್ಲ. ? ರಾತ್ರಿಯಲ್ಲೆಲ್ಲ

ಭರಮನಿಗೆ ನಿದ್ದೆಹತ್ತಲಿಲ್ಲ. ಬೆಳಗು ಯಾವಾಗ ಆದೀತು? ದೇವರು ಯಾವಾಗ ಬಂದಾನು? ಎಂಬ ಹಂಬಲ. ಮುಂಜಾನೆ ದಿನಕ್ಕಿಂತ ಬೇಗನೆ ಎದ್ದನು; ತನ್ನ ಅಂಗಡಿಯಲ್ಲಿ ದೇವರ ಹಾದಿಯನ್ನು ನೋಡುತ್ತ ಕುಳಿತನು.

ಅಷ್ಟರಲ್ಲಿ ಒಬ್ಬ ಮುದುಕನು ಎದುರಿಗೆ ಬರುವದನ್ನು ಕಂಡನು. ಮುಪ್ಪಿನಿಂದ ಆತನ ಮೈಯೆಲ್ಲ ಹಾಗಲಹಣ್ಣಿನಂತಾಗಿದೆ. ಟೊಂಕವು ಬಾಗಿದೆ; ಕಾಲಲ್ಲಿ ಕೆರವುಗಳಿಲ್ಲ. ನಡೆಯುವಾಗ ಕಲ್ಲು ಚುಚ್ಚಿ ಆತನ ಪಾದಗಳಿಂದ ಅಲ್ಲಲ್ಲಿ ರಕ್ತವು ಸೋರುತ್ತಿದೆ. ಅವನನ್ನು ಕಂಡು ಭರಮನಿಗೆ ಬಹಳ ಕನಿಕರವೆನಿಸಿತು. ಅವನು ಆ ಮುದುಕನನ್ನು ಆದರದಿಂದ ಕರೆದನು; ಅವನಿಗೆ ಕಾಲಲ್ಲಿ ಹಾಕಿಕೊಳ್ಳಲು ಕೆರವಿನ ಜೋಡನ್ನು ಕೊಟ್ಟನು. ಮುದುಕನು ಭರಮನಿಗೆ—"ತಮ್ಮಾ, ನಿನ್ನ ಈ ದಾನದಿಂದ ದೇವರು ಸಂತೋಷಹೊಂದಿದನು; ನಿನಗೆ ಕಲ್ಯಾಣವಾಗಲಿ" ಎಂದು ಹರಸಿ ಮುಂದೆ ಸಾಗಿದನು.

ದೇವರು ಬರಲಿಲ್ಲ. ಭರಮನು ದೇವರ ಹಾದಿಯನ್ನು ಕಾಯುತ್ತ ಹೊತ್ತು ಮುಳುಗುವ ವರೆಗೆ ಕುಳಿತನು. ಆತನಿಗೆ ಹೊಟ್ಟೆಯ ಪರವೆಯೇ ಇಲ್ಲ. ಆದರೂ ದೇವರ ಸುಳಿವೇ ಇಲ್ಲ. ಭರಮನು ಇನ್ನು ದೇವರು ಬರಲಾರನೆಂದು ಅಂದುಕೊಂಡನು. ಆತನ ಮೋರೆ ಸಪ್ಪಗಾಯಿತು.

ಅಷ್ಟರಲ್ಲಿ ಒಂದು ಸಣ್ಣ ಹುಡಿಗಿ ಅಳುತ್ತ ಬರುವದನ್ನು ಕಂಡನು. ಅವಳು ತನ್ನ ತಾಯಿತಂದೆಗಳಿಂದ ತಪ್ಪಿಸಿಕೊಂಡಿದ್ದಳು; ಅದರಿಂದ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಹಸಿವೆ ನೀರಡಿಕೆಗಳಿಂದ ಆಕೆಯ ಬಾಯಿ ಆರಿತ್ತು. ಭರಮನು ಸಮೀಪಕ್ಕೆ ಹೋಗಿ ಆ ಹುಡಿಗೆಯನ್ನು ಎತ್ತಿಕೊಂಡನು; ತನ್ನ ಅಂಗಡಿಗೆ ಬಂದನು. ಅವಳಿಗೆ ಒಂದು ಬಟ್ಟಲು ಹಾಲು ಕುಡಿಸಿದನು; ಆ ಮೇಲೆ ಅವಳನ್ನು ಆಕೆಯ ತಾಯಿ ತಂದೆಗಳನ್ನು ಹುಡುಕಿ, ಅವರ ಬಳಿಗೆ ಕಳಿಸಿ ಬಂದನು. ರಾತ್ರಿ ಬಹಳವಾಯಿತು. ದೇವರು ತನ್ನ ಮನೆಗೆ ಬರಲಿಲ್ಲವೆಂದು ಭರಮನು ಬಹಳ ಹಳಹಳಿಸಿದನು. ಹಾಗೆಯೇ ಚಿಂತಿಸುತ್ತ ಮಲಗಿದನು.



ಬೆಳಗಿನ ಜಾವದಲ್ಲಿ ಅವನಿಗೆ ಕನಸು ಬಿತ್ತು. ಕನಸಿನಲ್ಲಿ ದೇವರು "ಭರಮಾ, ಚಿಂತಿಸಬೇಡ; ನಿನ್ನೆ ಎರಡು ಬಾರಿ ನಿನ್ನ ಮನೆಗೆ ಬಂದಿದ್ದೆ. ಮೊದಲನೆಯ ಸಾರೆ ಮುದುಕನಾಗಿ ಬಂದೆ. ನೀನು ಕೆರವಿನ ಜೋಡನ್ನು ಕೊಟ್ಟೆ. ಎರಡನೆಯ ಸಾರೆ ಚಿಕ್ಕ ಹುಡುಗೆಯಾಗಿ ಬಂದೆ; ನೀನು ಹಾಲನ್ನು ಕುಡಿಸಿದೆ. ನೀನು ಅವರಿಗೆ ಮಾಡಿದ ಸೇವೆಯು ನಿಜವಾಗಿ ನನಗೇ ಸಂದಿದೆ. ದುಃಖದಲ್ಲಿದ್ದವರ ಸೇವೆಯು ದೇವರ ಸೇವೆಯೇ ಸರಿ" ಎಂದು ಹೇಳಿದಂತಾಯಿತು. ಭರಮನು ಥಕ್ಕನೆ ಎಚ್ಚತ್ತು ಕುಳಿತನು. ದೇವರು ತನ್ನ ಮನೆಗೆ ಎರಡು ಸಾರೆ ಬಂದನೆಂದು ಹಿರಿಹಿರಿ ಹಿಗ್ಗಿದನು.

ಅಭ್ಯಸನಗಳು:—

೧. ಭರಮನು ಎಂಥ ಮುದುಕನನ್ನು ನೋಡಿದನು ?

೨. ಭರಮನು ಆ ಹುಡಿಗೆಯನ್ನು ಹೇಗೆ ಉಪಚರಿಸಿದನು ?

೩. ಕಡೆಗೆ ಭರಮನಿಗೆ ಕನಸಿನಲ್ಲಿ ದೇವರು ಏನು ಹೇಳಿದರು ?

# ೨೫. ಜಾತ್ರೆ



ಅಂದು ಮಹಾಶಿವರಾತ್ರಿ. ಹುಬ್ಬಳ್ಳಿಯಲ್ಲಿ ಸಿದ್ಧಾರೂಢರ ಜಾತ್ರೆ. ಸುತ್ತಲಿನ ಹಳ್ಳಿಗಳ ಜನರು ಅಲ್ಲಿ ನೆರೆಯುವರು. ಗುಲಗಂಜಿ ಕೊಪ್ಪದ ಸಾಲೆಯ ಕೆಲವು ಹುಡುಗರು ಈ ಜಾತ್ರೆಗೆ ಹೊರಡಲು ನಿಶ್ಚಯಿಸಿದ್ದರು. ಅವರು ಧಾರವಾಡದ ಉಗಿಬಂಡಿಯ ನಿಲ್ದಾಣಕ್ಕೆ ಬಂದರು. ಅಂದು ನಿಲ್ದಾಣದಲ್ಲಿ ಜನರ ಗದ್ದಲ ಬಹಳ. ಎಲ್ಲರೂ ಉಗಿಬಂಡಿಯಲ್ಲಿ ಕುಳಿತು ಹೊರಟರು.

ಅರ್ಧ ಗಂಟೆಯಲ್ಲಿ ಉಗಿಬಂಡಿಯು ಹುಬ್ಬಳ್ಳಿ ನಿಲ್ದಾಣಕ್ಕೆ ತಲುಪಿತು. ಎಲ್ಲರೂ ಬಂಡಿಯಿಂದ ಇಳಿದರು. ಸಿದ್ಧಾರೂಢರ ಮಠಕ್ಕೆ ನಡೆದರು. ಅಂದು ಮಠಕ್ಕೆ ಹೋಗುವ ಜನರೇ ಬಹಳ! ಎಲ್ಲರೂ ಮಠವನ್ನು ಮುಟ್ಟಿದರು.

ಬಸವ:–ಓಹೋ! ಸಿದ್ಧಾರೂಢರ ಮಠವು ಎಷ್ಟು ಭವ್ಯವಾಗಿದೆ?

ಗಂಗಾಧರ:–ಏನು! ಈಗಲೂ ಭಜನೆ ನಡೆದಿದೆಯಲ್ಲ!

ಶಿವು:– ಅಗೋ ಕೇಳಿರಿ ! ಅದು ಅಡಿಗೆಯ ಮನೆ. ಅಲ್ಲಿಯೂ ಭಜನೆ ನಡೆದಿರುವದು !

ಬಸವ:– ಅದೇಕೆ ? ಹಿತ್ತಲದಲ್ಲಿ ನೋಡಿರಿ. ಆ ಜನರು ಪಾತ್ರೆ ತೊಳೆಯುವರು. ಅವರೂ ಭಜನೆ ಮಾಡುತ್ತಿರುವರು !

ಗಂಗಾಧರ:– ಹೌದು ! ಎಲ್ಲರೂ ಭಜನೆಮಾಡುತ್ತ ತಮ್ಮ ತಮ್ಮ ಕೆಲಸ ಮಾಡುತ್ತಿರುವರು.

ಶಿವು:– ನಡೆಯಿರಿ; ನಾವೂ ಮಠದ ಪಡಸಾಲೆಗೆ ಹೋಗೋಣ. ತುಸು ಹೊತ್ತು ಭಜನೆಮಾಡೋಣ.

ಎಲ್ಲರೂ ಮಠದ ಪಡಸಾಲೆಗೆ ಬಂದರು. ಭಜನೆಯ ಮೇಳದಲ್ಲಿ ಸೇರಿ ಭಜನೆಮಾಡಿದರು. ಬಳಿಕ ಅಲ್ಲಿಯೇ ಎಲ್ಲರೂ ಊಟಮಾಡಿದರು. ಮಠದ ಊಟಕ್ಕೆ 'ಪ್ರಸಾದ' ಅನ್ನುವರು. ಪ್ರಸಾದವನ್ನು ತೆಗೆದುಕೊಂಡ ಮೂವರು ಬಾಲಕರು ಬಂದ ಜನರಿಗೆ ಪ್ರಸಾದ ನೀಡಲು ಸಜ್ಜಾದರು; ಎರಡು ಪಂತಿ ಮುಗಿಯುವವರೆಗೆ ಸೇವೆಮಾಡಿದರು. ಉಳಿದವರೂ ಮುಂದೆ ಬಂದು ಪ್ರಸಾದ ನೀಡಿದರು. ಹೀಗೆ ಎಲ್ಲರೂ ಅಲ್ಪ ಸೇವೆಮಾಡಿ ಹೊರಗೆ ಬಂದರು. ತುಸು ಹೊತ್ತು ವಿಶ್ರಾಂತಿ ತೆಗೆದುಕೊಂಡರು.

ತರುವಾಯ ತೇರು ನೋಡಲು ಎಲ್ಲ ಬಾಲಕರು ಹೊರಟರು. ತೇರು ನಿಂತ ಸ್ಥಳಕ್ಕೆ ಬಂದರು. ಅಲ್ಲಿ ಜನರು ಕಿಕ್ಕಿರಿದು ನೆರೆದಿದ್ದರು. ಅಲ್ಲಿ ದೊಡ್ಡ ಹಂದರ ಹಾಕಿದ್ದರು. ಹಂದರದ ಮೇಲೆ ತೆಂಗಿನ ಗರಿಗಳನ್ನು ಹೊಚ್ಚಿದ್ದರು. ತೇರು ಹೋಗುವ ದಾರಿಯುದ್ದಕ್ಕೂ ತಳಿರು ತೋರಣಗಳನ್ನು ಕಟ್ಟಿದ್ದರು. ಅಲ್ಲಲ್ಲಿ ಬಾಳೆಯ ಕಂಬಗಳನ್ನು ನಿಲ್ಲಿಸಿದ್ದರು.

ಶಿವು:–ಓಹೋ ! ತೇರನ್ನು ಎಷ್ಟು ಚೆಂದವಾಗಿ ಸಿಂಗರಿಸಿರುವರು, ನೋಡಿರಿ !

ಬಸವ:– ಅಹುದು ! ತೇರಿಗೆ ಕೆಂಪು, ಹಳದಿ, ಹಸಿರು ಬಣ್ಣಗಳ ಪತಾಕೆಗಳನ್ನು ಕಟ್ಟಿರುವರು. ಮಂಟಪಕ್ಕೆ ಬಾಳೆಯ ಕಂಬಗಳನ್ನೂ ಹೂವಿನ ಮಾಲೆಗಳನ್ನೂ ಕಟ್ಟಿರುವರು.

ಗಂಗಾಧರ:– ಮೇಲೆ ನೋಡಿರಿ! ತೇರಿಗೆ ಬಂಗಾರದ ಕಳಸವು ಅದೆ. ಅದು ಎಷ್ಟು ಲಕಲಕ ಹೊಳೆಯುವದು!

ಶಿವು:– ಆಗೋ ನೋಡಿರಿ! ಮಂಗಳಾರತಿ ನಡೆಯಿತು. ಠಣ್ ಠಣ್ ಎಂದು ಝಾಗಟೆ ಬಡಿಯತೊಡಗಿದರು. 'ಡಬ್ ಡಬ್' ಎಂದು ನಗಾರಿಯ ಸಪ್ಪಳ, 'ಭಂವ್' ಎಂದು ಶಂಖಧ್ವನಿ, 'ಪೀ ಪೀ' ಎಂದು ಸನಾದಿಯ ಸಪ್ಪಳ, 'ಕುಡು ಕುಡು' ಎಂದು ಕರಡಿಯ ಮಜಲಿನ ಅಬ್ಬರ!

ಬಸವ:– ಈ ವಾದ್ಯಗಳ ಸಪ್ಪಳಕ್ಕೆ ಕಿವಿಗಳು ಗಡಚಿಕ್ಕುವವು.

ಗಂಗಾಧರ:–'ಹರಹರ ಮಹಾದೇವ' ಎಂದು ಕೂಗುತ್ತ ಜನರು ತೇರನ್ನು ಎಳೆಯತೊಡಗಿದರು. ನಡೆಯಿರಿ, ನಾವೂ ತೇರನ್ನು ಎಳೆಯೋಣ.

ಎಲ್ಲ ಬಾಲಕರು ತೇರಿನ ಹಗ್ಗ ಹಿಡಿದರು. ನಾಲ್ಕಾರು ಹೆಜ್ಜೆ ತೇರು ಎಳೆದರು. ಆ ಮೇಲೆ ಅವರು ದಾರಿಯ ಬದಿಗೆ ಬಂದರು.

ಶಿವು:–ಅದು ನೋಡಿರಿ! ತೇರಿನ ಮೇಲೆ ಜನರು ಉತ್ತತ್ತಿಗಳನ್ನು ಒಗೆಯುವರು!

ಬಸವ:– ಓಹೋ! ಬೆಂಡು ಬತ್ತಾಸುಗಳನ್ನೂ ಒಗೆಯುವರು.

ಗಂಗಾಧರ:–ಇಲ್ಲಿ ನೋಡಿರಿ! ಇವರು ತೇರಿಗೆ ಆರತಿ ಮಾಡುವರು, ಅವರು ಹಣ್ಣುಕಾಯಿ ಕೊಡುವರು; ಅತ್ತ ಕೆಲವರು ಅಡ್ಡಬೀಳುವರು. ನಡೆಯಿರಿ; ಇನ್ನು ಮುಂದೆ ಹೋಗೋಣ.

ಶಿವು:–ಅಕೋ ನೋಡಿರಿ! ದಾರಿಯ ಎರಡೂ ಬದಿಗೆ ಅಂಗಡಿಗಳ ಸಾಲು. ಇವೆಲ್ಲ ಮಿಠಾಯಿಗಳ ಅಂಗಡಿಗಳು:

ಬಸವ:– ತಡೆಯಿರಿ; ತುಸು ಮಿಠಾಯಿ ಕೊಳ್ಳೋಣ.

ಗಂಗಾಧರ:– ಆ ಬದಿಗೆ ನೋಡಿರಿ! ಹೂವು ಹಣ್ಣುಗಳ ಅಂಗಡಿಗಳೂ ಅವೆ.

ಶಿವು:–ಈ ಅಂಗಡಿಯಲ್ಲಿ ಎಷ್ಟು ಜನ ಹೆಂಗಸರು ನೆರೆದಿರುವರಲ್ಲ!

ಬಸವ:—ಅವರು ತರತರದ ಬಳೆಗಳನ್ನು ಇಟ್ಟುಕೊಳ್ಳುತ್ತಿರುವರು. ಇದು ಬಳೆಗಳ ಅಂಗಡಿಗಳ ಸಾಲು.

ಗಂಗಾಧರ:— ಓಹೋ! ಅಲ್ಲಿ ತೊಟ್ಟಿಲ ಜೀಕುಗಳಿವೆ. ಜನರು ಆಡುತ್ತಿರುವರು. ನಾವೂ ಆಡೋಣ ನಡೆಯಿರಿ.

ತಲೆಗೆ ಒಂದು ಆಣೆ ಕೊಟ್ಟು ಎಲ್ಲರೂ ತೊಟ್ಟಿಲಜೀಕು ಆಡಿದರು. ಅಲ್ಲಿಯೇ ಬಯಲಲ್ಲಿ ಕುಳಿತು ಮಿಠಾಯಿ ತಿಂದರು. ನೆರೆಯ ಅರವಟ್ಟಿಗೆಗೆ ಹೋಗಿ ನೀರು ಕುಡಿದರು. ಸಂಜೆಯಾಯಿತು. ಜನರು ತಮ್ಮ ತಮ್ಮ ಮನೆಗಳಿಗೆ ನಡೆದರು. ಪರಿಸೆ ಒಡೆಯಿತು. ಆ ಬಾಲಕರು ಉಗಿಬಂಡಿಯ ನಿಲ್ದಾಣಕ್ಕೆ ಹೋದರು. ಜಾತ್ರೆಯಲ್ಲಿ ನೋಡಿದ ಸಂಗತಿಗಳನ್ನೇ ಮಾತಾಡುತ್ತ ಊರು ಮುಟ್ಟಿದರು.

ಅಭ್ಯಸನಗಳು:—

೧. ಆ ಹುಡುಗರು ಸಿದ್ಧಾರೂಢರ ಮಠದಲ್ಲಿ ಏನೇನು ಕಂಡರು?

೨. ತೇರಿನ ಮುಂದೆ ಯಾವ ಯಾವ ವಾದ್ಯಗಳನ್ನು ಬಾರಿಸುತ್ತಿದ್ದರು?

೩. ಜಾತ್ರೆಯಲ್ಲಿ ಯಾವ ಯಾವ ಅಂಗಡಿಗಳನ್ನು ಇಟ್ಟಿದ್ದರು?

೪. ತೇರಿನ ವರ್ಣನೆ ಹೇಳಿರಿ.

೫. ಕೆಳಗಿನ ಒಂದೊಂದು ಶಬ್ದ ಬಳಸಿ, ಒಂದೊಂದು ಮಾತು ಬರೆಯಿರಿ:

ನಿಶ್ಚಯಿಸು, ಸಿಂಗರಿಸು, ಗಡಚಿಕ್ಕು, ಅರವಟ್ಟಿಗೆ, ಪರಿಸೆ.

೬. ಸರಿಯಾದ ಶಬ್ದಗಳನ್ನು ಜೋಡಿಸಿರಿ:

...ಎಂದು ಡೋಲಿನ ಸಪ್ಪಳ.
...ಎಂದು ಸನಾದಿಯ ಸಪ್ಪಳ.
...ಎಂದು ಝಾಗಟೆಯ ಸಪ್ಪಳ.
...ಎಂದು ಗಂಟೆಯ ಸಪ್ಪಳ.
...ಎಂದು ಶಂಖದ ಸಪ್ಪಳ.
...ಎಂದು ಕರಡಿಯ ಮಜಲಿನ ಅಬ್ಬರ.

# ೨೬. ಆಕಳ ಕಥೆ



ಭಾಗ ೨

ಅಮ್ಮಗಳಿರಾ ಅಕ್ಕಗಳಿರಾ,
ನಮ್ಮ ತಾಯೊಡಹುಟ್ಟುಗಳಿರಾ,
ನಿಮ್ಮ ಕಂದನೆಂದು ಕಾಣಿರಿ
ತಬ್ಬಲಿಯನೀ ಕರುವನು. ॥ ೮ ॥

ಮುಂದೆ ಬಂದರೆ ಹಾಯಬೇಡಿ,
ಹಿಂದೆ ಬಂದರೆ ಒದೆಯಬೇಡಿ,
ಕಂದ ನಿಮ್ಮವನೆಂದು ಕಾಣಿರಿ
ತಬ್ಬಲಿಯನೀ ಕರುವನು. ॥ ೯ ॥

ಕಟ್ಟ ಕಡೆಯಲಿ ಮೇಯಬೇಡ;
ಬೆಟ್ಟದೊತ್ತಿಗೆ ಹೋಗಬೇಡ;
ದುಷ್ಟ ವ್ಯಾಘ್ರನು ಹೊಂಚುತಿರುವನು,
ನಟ್ಟ ನಡುವಿರು ಕಂದನೆ. ॥ ೧೦ ॥

ತಪ್ಪಲಾರದ ಸನಾದ ಮಗನ,
ಹೆಬ್ಬುಲಿಯು ಬಾಯನ್ನು ಹೊಗುವೆನು,
ಇಬ್ಬರಾ ಋಣ ತೀರಿತೆಂದು
ತಬ್ಬಿಕೊಂಡಿತು ಕಂದನ. ॥ ೧೧ ॥

ಗೋವು ಕರುವನು ಬಿಟ್ಟು ಬಂದು
ಸಾವಕಾಶವ ಮಾಡದಂತೆ
ಗವಿಯ ಬಾಗಿಲ ಸೇರಿನಿಂತು
ತವಕದಲಿ ಹುಲಿಗೆಂದಿತು. ॥ ೧೨ ॥

ಖಂಡವಿದೆಕೋ, ಮಾಂಸವಿದೆಕೋ
ಗುಂಡಿಗೆಯ ಬಿಸಿರಕ್ತವಿದೆಕೋ
ಚಂಡವ್ಯಾಘ್ರನೆ ನೀನಿವೆಲ್ಲವ
ನುಂಡು ಸಂತಸದಿಂದಿರು. ॥ ೧೩ ॥

ಪುಣ್ಯಕೋಟಿಯ ಮಾತ ಕೇಳಿ
ಕಣ್ಣನೀರನು ಸುರಿಸಿನೊಂದು
ಕನ್ನೆ ಇವಳನು ಕೊಂದು ತಿಂದರೆ
ಮೆಚ್ಚನಾ ಪರಮಾತ್ಮನು. ॥ ೧೪ ॥

ಎನ್ನ ಒಡಹುಟ್ಟಕ್ಕ ನೀನು
ನಿನ್ನ ಕೊಂದು ನಾನೇನ ಪಡೆವೆನು
ಎನ್ನುತಾಹುಲಿ ಹಾರಿ ನೆಗೆದು
ತನ್ನ ಪ್ರಾಣವ ಬಿಟ್ಟಿತು. ॥ ೧೫ ॥

ಅಭ್ಯಸಸಗಳು:—

೧. ಆಕಳು ಉಳಿದ ಆಕಳುಗಳಿಗೆ ಏನು ಹೇಳಿತು ?
೨. ಆಕಳು ಕರುವಿಗೆ ಏನು ಉಪದೇಶಮಾಡಿತು ?
೩. ಆಕಳು ಹುಲಿಯ ಹತ್ತಿರ ಬಂದು ಅದಕ್ಕೆ ಏನು ಹೇಳಿತು ?
೪. ಆಗ ಹುಲಿಗೆ ಏನು ಅನಿಸಿತು ?
೫. ಮುಂದೆ ಹುಲಿಯು ಏನು ಮಾಡಿತು ?

# ೩೭. ಗಿಡಗಳ ಕೊರಗು



ಬಹಳ ಹಿಂದಿನ ಕಾಲದ ಕತೆ. ಆಗ ನಮ್ಮ ನಾಡಿನ ಬಹು ಭಾಗವು ಗಿಡಗಳಿಂದ ತುಂಬಿತ್ತು. ಹವೆ ಅಷ್ಟು ಉಷ್ಣವೂ ಆಗಿರಲಿಲ್ಲ, ಅಷ್ಟು ಶೀತವೂ ಆಗಿರಲಿಲ್ಲ; ಬಹಳ ಚೆನ್ನಾಗಿತ್ತು. ಕಾಲಕಾಲಕ್ಕೆ ಮಳೆ ಆಗುತ್ತಿತ್ತು. ಆಗ ಬರ ಬೀಳುತ್ತಿರಲಿಲ್ಲ. ಅನ್ನ ನೀರುಗಳ ಕೊರತೆ ಸ್ವಲ್ಪವೂ ಇರಲಿಲ್ಲ. ಜನರೆಲ್ಲ ಬಹಳ ಸುಖಿಗಳಾಗಿದ್ದರು.

ಆದರೆ ಒಮ್ಮೆ ಜನರು—'ಗಿಡಗಳನ್ನು ಕಡಿಯೋಣ. ಅಡಿಗೆಗೆ ಉರುವಲು ಬೇಕು; ಮನೆ ಹಾಕಲಿಕ್ಕೆ ಕಟ್ಟಿಗೆ ಬೇಕು; ದೊಡ್ಡ ದೊಡ್ಡ ಹಡಗುಗಳನ್ನು ಕಟ್ಟಲು ಕಟ್ಟಿಗೆ ಬೇಕು. ಆದ್ದರಿಂದ ಗಿಡಗಳನ್ನು ಕಡಿಯಲೇ ಬೇಕು. ಗಿಡಗಳನ್ನು ಹಾಗೆಯೇ ಬೆಳೆಯಗೊಟ್ಟರೆ, ನಮ್ಮ ನಾಡು ಕಾಡು ಆಗುವದು. ಕಾಡಪಶುಗಳ ತವರುಮನೆಯಾಗುವದು' ಎಂದು ಮಾತಾಡತೊಡಗಿದರು.

ಈ ಮಾತುಗಳನ್ನು ಕೇಳಿ ಒಂದು ಗಿಡವು ದುಃಖಿಸುತ್ತ, "ಅಣ್ಣಾಗಳಿರಾ, ನಮ್ಮನ್ನು ಕಡಿಯಬೇಡಿರಿ. ನಾವು ನಿಮಗೆ ಮಳೆ

ಕೊಡುತ್ತೇವೆ. ನಾವಿಲ್ಲದಿದ್ದರೆ ನಿಮ್ಮನಾಡು ಬರಿಯ ಬಯಲಾಗುತ್ತದೆ” ಎಂದು ಅಂದಿತು. ಮತ್ತೊಂದು ಗಿಡವು ಇಳಿಮೋರೆ ಹಾಕಿ ಹೇಳಿತು.–“ನಮ್ಮನ್ನು ಕಡಿದರೆ ನಿಮಗೆ ನೆರಳು ಎಲ್ಲಿಂದ ಸಿಗುವದು? ಹಣ್ಣು ಹಂಪಲುಗಳು ಎಲ್ಲಿಂದ ಸಿಗುವವು? ನಿಮಗೆ ಸುಖವು ಎಲ್ಲಿಂದ ದೊರಕುವದು? ಅದಕ್ಕಾಗಿ ನಮ್ಮನ್ನು ಕಡಿಯಬೇಡಿರಿ.”

ಪಾಪ! ಗಿಡಗಳು ಹೀಗೆ ಪರಿಪರಿಯಿಂದ ಬೇಡಿಕೊಂಡವು. ಆದರೆ ಜನರು ಅವುಗಳ ಮಾತಿಗೆ ಕಿವಿಗೊಡಲಿಲ್ಲ. ಗಿಡಗಳನ್ನು ಕಡಿದು ಹಾಕಲೇಬೇಕೆಂದು ನಿಶ್ಚಯಿಸಿದರು. ಅದೇ ಮೇರೆಗೆ ಒಂದೊಂದನ್ನೇ ಕಡಿಯಲಿಕ್ಕೆ ಆರಂಭಿಸಿದರು. ಪಕ್ಷಿಗಳು ಗಿಡಗಳಲ್ಲಿ ಗೂಡು ಕಟ್ಟಿಕೊಂಡು ಇದ್ದವು. ಅವೆಲ್ಲ ಹಾರಿಹೋದವು; ಕಾಣದಾದವು ಮುಂದೆ ಕೆಲದಿನಗಳಲ್ಲಿಯೇ ಗಿಡಗಳ ಮಾತಿನ ಸತ್ಯತೆಯು ತಿಳಿಯತೊಡಗಿತು. ಅಲ್ಲಿದ್ದ ಹಳ್ಳಗಳು ಬತ್ತಿದವು. ಬಿಸಿಲಲ್ಲಿ ಕೆಲಸಮಾಡುವವರಿಗೆ ನೆರಳೇ ಇಲ್ಲದಂತಾಯಿತು. ಬಿಸಿಲಿನ ತಾಪದಿಂದ ಜನರು ಬಳಲಹತ್ತಿದರು. ಮಳೆಯಿಲ್ಲದ್ದರಿಂದ ಹೊಲಗದ್ದೆಗಳಲ್ಲಿಯ ಪೈರು ಒಣಗಹತ್ತಿದವು. ಕಡೆಗೆ ನಾಡಿನಲ್ಲಿ ದೊಡ್ಡ ಬರ ಬಿದ್ದಿತು. ಸಾವಿರಾರು ಜನರು ಅನ್ನನೀರಿಲ್ಲದೆ ಬಳಲತೊಡಗಿದರು.

ಗಿಡಗಳನ್ನು ಕಡಿದದ್ದರಿಂದ ತಮಗೆ ಇಂಥ ಸಂಕಟವು ಬಂದಿತೆಂದು ಜನರಿಗೆ ಗೊತ್ತಾಯಿತು. ಅಂದಿನಿಂದ ಜನರು ಗಿಡಗಳನ್ನು ಮತ್ತೆ ಹಚ್ಚತೊಡಗಿದರು.

ಅಭ್ಯಾಸಗಳು:–

೧. ಗಿಡಗಳನ್ನು ಕಡಿಯುವಾಗ, ಅವು ಜನರಿಗೆ ಏನೇನು ಹೇಳಿದವು?
೨. ಗಿಡಗಳನ್ನು ಕಡಿದ ಮೇಲೆ ಏನಾಯಿತು?
೩. ಗಿಡಗಳ ಉಪಯೋಗದ ಬಗ್ಗೆ ನಾಲ್ಕು ಮಾತುಗಳನ್ನು ಬರೆಯಿರಿ.
೪. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:
   ಅ) ನಾವು ಇಲ್ಲದಿದ್ದರೆ ——— ——— ಬರಿಯ ——— ಆಗುವದು.
   ಆ) ——— ಗಿಡಗಳು ——— ಯಿಂದ ಬೇಡಿಕೊಂಡವು.
   ಇ) ಜನರು ಅವುಗಳ ಮಾತಿಗೆ——

# ೨೮. ತಾನೇ ಮಾಡುವದು ಉತ್ತಮ



ಬಸಪ್ಪ ದೊಡ್ಡ ಒಕ್ಕಲಿಗ: ಅವನಿಗೆ ಹೊಲಗಳು ಬಹಳ. ಅವುಗಳಲ್ಲಿ ಹಳ್ಳದ ಹೊಲವು ಬಹಳ ದೊಡ್ಡದು. ಆದರೆ ಆ ಹೊಲದಲ್ಲಿ ಬೆಳೆ ತಕ್ಕಷ್ಟು ಬರುತ್ತಿರಲಿಲ್ಲ; ಯಾಕಂದರೆ ಆ ಹೊಲದ ನಡುವೆ ದೊಡ್ಡದೊಂದು ಮರವಿತ್ತು. ಅದರ ನೆರಳಿನಿಂದ ಮರದ ಸುತ್ತಲೆಲ್ಲ ಪೈರು ಹುಟ್ಟುತ್ತಿರಲಿಲ್ಲ; ಆದ್ದರಿಂದ ಬಸಪ್ಪನು ಈ ಮರವನ್ನು ಬೇಗನೆ ಕಡಿಸಬೇಕೆಂದು ನಿಶ್ಚಯಿಸಿದನು.

ಮರುದಿನ ಬಸಪ್ಪನು ತನ್ನ ಆಳುಮಗ ಮಲ್ಲಪ್ಪನೊಡನೆ ಹಳ್ಳದ ಹೊಲಕ್ಕೆ ಬಂದನು. ಮಲ್ಲಪ್ಪನನ್ನು ಆ ಮರದ ಕೆಳಗೆ ಕರೆದೊಯ್ದನು. “ಮಲ್ಲಪ್ಪಾ, ಹೊಲದ ನಡುವೆ ಗಿಡವು ಇರಬಾರದು. ಒಬ್ಬಿಬ್ಬರು ಆಳುಗಳನ್ನು ಸಹಾಯಕ್ಕೆ ಕರೆದುಕೊಂಡು, ನಾಳೆ ಈ ಗಿಡವನ್ನು ಕಡಿದುಹಾಕು” ಎಂದು ಹೇಳಿ ಮನೆಗೆ ಹೋದನು. ಈ ಗಿಡದಲ್ಲಿ ಗೀಜಗದ ಹಕ್ಕಿಗಳೆರಡು ಗೂಡು ಕಟ್ಟಿಕೊಂಡು ಇದ್ದವು; ಆ ಗೂಡಿನಲ್ಲಿ ಎರಡು ಎಳೆಯ ಮರಿಗಳು ಇದ್ದವು. ಅವುಗಳಿಗೆ

ಆಹಾರ ತರಲೋಸುಗ ಗಂಡು ಹಕ್ಕಿ ಹೊರಗೆ ಹೋಗಿತ್ತು. ಹೆಣ್ಣು ಹಕ್ಕಿ ಗೂಡಿನಲ್ಲಿತ್ತು. ಬಸಪ್ಪನ ಮಾತುಗಳನ್ನು ಕೇಳಿ ಅದು ಗಾಬರಿಯಾಯಿತು. “ಮಲ್ಲಪ್ಪನು ಬಂದು ನಾಳೆ ಮರವನ್ನು ಕಡಿಯುವನು. ನಮ್ಮಗೂಡು ಹಾಳಾಗಿ ಹೋಗುವದು. ಇನ್ನೂ ರೆಕ್ಕೆ ಬಾರದ ಈ ಮರಿಗಳಿಗೆ ಗತಿ ಏನು? ದೇವರೇ, ಈ ಸಂಕಟದಿಂದ ಹೇಗೆ ಪಾರು ಮಾಡುವೆ?” ಎಂದು ಹೆಣ್ಣು ಹಕ್ಕಿ ಚಿಂತಿಸತೊಡಗಿತು ಅಷ್ಟರಲ್ಲಿ ಗಂಡು ಹಕ್ಕಿ ಹೊರಗಿನಿಂದ ಬಂದಿತು.

ಹೆಣ್ಣು ಗೀಜಗವು ತಮಗೆ ಒದಗಿದ ವಿಪತ್ತನ್ನು ಗಂಡಿಗೆ ವಿವರಿಸಿ ಹೇಳಿತು. ಆಗ ಗಂಡು ಗೀಜಗವು-“ಮಡದೀ, ಮರುಗಬೇಡ; ಬಸಪ್ಪನು ಮರವನ್ನು ಕಡಿಯಲು ಆಳಿಗೆ ಹೇಳಿದನಷ್ಟೇ! ಆಳಿಗೆ ಹೇಳಿದ ಕೆಲಸ ಎಂದಾದರೂ ವೇಳೆಗೆ ಆಗುವದುಂಟೇ? ಮಲ್ಲಪ್ಪನು ಇನ್ನು ತಿಂಗಳಿಗೆ ಗಿಡವನ್ನು ಕಡಿದರೆ ಬಸಪ್ಪನ ಪುಣ್ಯ! ಅಷ್ಟರಲ್ಲಿ ನಮ್ಮ ಮರಿಗಳಿಗೆ ರೆಕ್ಕೆ ಬಲಿತು ಹಾರಲಿಕ್ಕೆ ಬಂದೀತು. ನೀನು ಸ್ವಸ್ಥವಾಗಿ ಇರು” ಎಂದು ಹೇಳಿತು.

ಮುಂದೆ ಹದಿನೈದು ಇಪ್ಪತ್ತು ದಿನಗಳ ಮೇಲೆ ಬಸಪ್ಪನು ತನ್ನ ಮಗ ಚೆನ್ನನೊಡನೆ ಹಳ್ಳದ ಹೊಲಕ್ಕೆ ಹೊರಟನು. ಹೊಲಕ್ಕೆ ಬಂದು ನೋಡುತ್ತಾನೆ; ಮರವು ಹಾಗೆಯೇ ನಿಂತಿದೆ! ಬಸಪ್ಪನು ಮಗನಿಗೆ “ಚೆನ್ನಾ, ಈ ಮರವನ್ನು ಕಡಿಯಲಿಕ್ಕೆ ಮಲ್ಲಪ್ಪನಿಗೆ ಹೇಳಿ, ಇಪ್ಪತ್ತು ದಿನಗಳಾದವು. ಇನ್ನೂ ಕಡಿದಿಲ್ಲ. ಆಳಿನ ಕೆಲಸ ಹಾಳು! ನಾಳೆ ನೀನೇ ಒಬ್ಬಿಬ್ಬರನ್ನು ನೆರವಿಗೆ ಕರೆದುಕೊಂಡು ಈ ಮರವನ್ನು ಕಡಿ” ಎಂದು ಹೇಳಿದನು. ಚೆನ್ನನು “ಆಗಲಿ, ಕಡಿಯುವೆನು” ಎಂದನು. ಇಬ್ಬರೂ ಮನೆಗೆ ನಡೆದರು.

ಮುಂದೆ ಹತ್ತೆಂಟು ದಿನಗಳ ತರುವಾಯ ಬಸಪ್ಪನು ಸಂಜೆಯ ಮುಂದೆ ಮಗನೊಡನೆ ಮತ್ತೆ ಹಳ್ಳದ ಹೊಲಕ್ಕೆ ಬಂದನು. ಇನ್ನೂ ಮರವು ಹಾಗೆಯೇ ನಿಂತಿದೆ. ಬಸಪ್ಪನು ರೇಗಿದನು. “ಚೆನ್ನಾ,

ನೀನೂ ಮರವನ್ನು ಕಡಿಯಲಿಲ್ಲ. ನಾಳೆ ನಾನೇ ಕೊಡಲಿಯನ್ನು ಹಿಡಿದುಕೊಂಡು ಬರುವೆನು. ನೀನೂ ಮಲ್ಲನೂ ನನ್ನ ಸಂಗಡ ಬರಬೇಕು" ಎಂದು ಸಿಟ್ಟುಮಾಡಿ ಹೇಳಿದನು.

ಬಸಪ್ಪನ ಮಾತುಗಳನ್ನು ಗೂಡಿನೊಳಗಿನ ಗೀಜಗಗಳು ಕೇಳಿದವು. ಗಂಡು ಹಕ್ಕಿಯು—"ಬಸಪ್ಪನು ತಾನೇ ಮರವನ್ನು ಕಡಿಯಲು ಬರುವನು. ನಾಳೆ ಈ ಮರವು ಬೀಳುವದು ನಿಜ. ಬೀಳಲಿ, ನಮಗೇನೂ ಅಂಜಿಕೆ ಇಲ್ಲ. ಮರಿಗಳಿಗೆ ರೆಕ್ಕೆ ಬಲಿತಿವೆ. ನಾಳೆ ಬೆಳಗಾದ ಕೂಡಲೆ, ಮರಿಗಳೊಡನೆ ಹಾರಿಹೋಗೋಣ" ಎಂದಿತು. ಬಸಪ್ಪನು ತಾನು ನುಡಿದಂತೆ ಮರುದಿನ ಆ ಮರವನ್ನು ಕಡಿದು ಹಾಕಿದನು. ಚೆನ್ನನು ಗೀಜಗದ ಚೆಂದವಾದ ಗೂಡನ್ನು ತೆಗೆದುಕೊಂಡು ಒಳಗೆ ಕೈಹಾಕಿದನು. ಗೂಡು ಬರಿಯದು!

ಅಭ್ಯಾಸಗಳು:—

೧. ಬಸಪ್ಪನು ಗಿಡವನ್ನು ಕಡಿಯಲು ಯಾಕೆ ಹೇಳಿದನು?

೨. ಗೀಜಗದ ಹಕ್ಕಿಗಳಿಗೆ ಯಾವ ಸಂಕಟ ಬಂದಿತು?

೩. ಗಂಡು ಗೀಜಗವು ಏನು ಅಂದಿತು?

೪. ಕಡೆಗೆ ಆ ಮರವನ್ನು ಯಾರು ಕಡಿದರು?

೫. ಬಸಪ್ಪನೇ ಗಿಡವನ್ನು ಯಾಕೆ ಕಡಿಯಬೇಕಾಯಿತು?

೬. ಗಿಡವನ್ನು ಕಡಿದಾಗ ಗೂಡು ಬರಿಯದು ಯಾಕೆ ಆಗಿತ್ತು?

೭. ಕೆಳಗಿನ ಒಂದೊಂದು ಶಬ್ದವನ್ನು ಬಳಸಿ, ಒಂದೊಂದು ವಾಕ್ಯಮಾಡಿರಿ:
ನಿಶ್ಚಯಿಸು, ವಿಪತ್ತು, ಸ್ವಸ್ಥವಾಗಿ, ಠೀಗು.

೮. ಹಕ್ಕಿಗಳ ಮನೆಗೆ ಗೂಡು ಅನ್ನುತ್ತಾರೆ. ಇದರಂತೆ ಕೆಳಗಿನ ಮಾತುಗಳನ್ನು ಪೂರ್ಣಮಾಡಿರಿ:

ಅ) ದನಗಳ ಮನೆಗೆ——— ಅನ್ನುತ್ತಾರೆ.
ಆ) ಕುರಿಗಳ ಮನೆಗೆ——— ಅನ್ನುತ್ತಾರೆ.
ಇ) ಹಾವಿನ ಮನೆಗೆ——— ಅನ್ನುತ್ತಾರೆ.
ಈ) ಇಲಿಗಳ ಮನೆಗೆ——— ಅನ್ನುತ್ತಾರೆ.

ಈಶ್ವರಚಂದ್ರರ ದಾರಿಯನ್ನು ಕಾಯುತ್ತ ಕುಳಿತಿದ್ದರು. ವೇಳೆಗೆ ಸರಿಯಾಗಿ ಸಾದಾ ಉಡುಪನ್ನು ಧರಿಸಿದ ವಿದ್ಯಾಸಾಗರರು ಬಂದರು. ನೆರೆದ ಜನರೆಲ್ಲ ಎದ್ದುನಿಂತು ಅವರಿಗೆ ಸನ್ಮಾನಮಾಡಿದರು. ಅವರನ್ನು ಕಂಡಕೂಡಲೆ ಆ ಹುಡುಗನಿಗೆ ಹಿಂದಿನ ರಾತ್ರಿ ತನ್ನ ಕೈ ಪೆಟ್ಟಿಗೆಯನ್ನು ತಂದ ಕೂಲಿಯವನ ನೆನಪಾಯಿತು. ಮರುಕ್ಷಣವೇ ತಾನು ಕೂಲಿಯವನೆಂದು ತಿಳಿದುಕೊಂಡಿದ್ದ ಮನುಷ್ಯನು ಈಶ್ವರಚಂದ್ರ ವಿದ್ಯಾಸಾಗರರೇ ಎಂಬದು ಗೊತ್ತಾಯಿತು. ಕ್ಷಣಹೊತ್ತು ಕಣ್ಣಿಗೆ ಕತ್ತಲೆ ಕವಿದಂತಾಯಿತು. ಅವನು ಮನದೊಳಗೆ ಮರುಗಿದನು. "ನಾನೆಂಥ ಕೀಳುಕೆಲಸ ಮಾಡಿದೆನಲ್ಲ!" ಎಂದು ಅವನಿಗೆ ಪಶ್ಚಾತ್ತಾಪವಾಯಿತು. ಈ ಕಳವಳದಲ್ಲಿ ಅವನು ಅವರ ಭಾಷಣವು ಯಾವಾಗ ಮುಗಿದೀತೆಂದು ಹಾದಿ ನೋಡುತ್ತಿದ್ದನು.

ಭಾಷಣವು ಮುಗಿಯಿತು. ಹುಡುಗನು ಈಶ್ವರಚಂದ್ರರ ಹತ್ತಿರ ಹೋದನು. ಅವರ ಕಾಲಿಗೆ ಎರಗಿ, ತನ್ನನ್ನು ಕ್ಷಮಿಸ ಬೇಕೆಂದು ವಿನಯದಿಂದ ಬೇಡಿಕೊಂಡನು. "ತಮ್ಮಾ, ನಮ್ಮ ಕೆಲಸವನ್ನು ನಾವೇ ಮಾಡಬೇಕು; ನಮ್ಮ ಜೀವನವು ಸಾದಾ ಹಾಗು ಸರಳ ಇರಬೇಕು; ಡಂಭಕ್ಕೆ ಎಡೆಗೊಡಬಾರದು; ಪರರಿಗೆ ನೆರವಾಗಬೇಕು" ಎಂದು ಈಶ್ವರಚಂದ್ರರು ಅವನಿಗೆ ಬುದ್ಧಿಯ ಮಾತುಗಳನ್ನು ಹೇಳಿ ಕಳಿಸಿದರು.

ಅಭ್ಯಸನಗಳು:—

೧. ಈಶ್ವರಚಂದ್ರರನ್ನು ವಿದ್ಯಾಸಾಗರ ಎಂದು ಯಾಕೆ ಕರೆಯುತ್ತಿದ್ದರು ?
೨. ಅವರ ಉಡುಪು ಎಂತಹದಿತ್ತು ?
೩. ಒಮ್ಮೆ ಅವರು ಎಲ್ಲಿಗೆ ಹೊರಟಿದ್ದರು ?
೪. ಆ ಹುಡುಗನ ಕೈ ಪೆಟ್ಟಿಗೆಯನ್ನು ಯಾರು ಒಯ್ದರು ?
೫. ಆ ಹುಡುಗನಿಗೆ ಏಕೆ ಪಶ್ಚಾತ್ತಾಪವಾಯಿತು ?
೬. ಸಭೆ ಮುಗಿದ ಬಳಿಕ ಹುಡುಗನು ವಿದ್ಯಾಸಾಗರರ ಹತ್ತಿರ ಏಕೆ ಹೋದನು ?
೭. ಈಶ್ವರಚಂದ್ರರಲ್ಲಿ ನೀವು ಕಂಡುಕೊಂಡ ಗುಣಗಳು ಯಾವವು ?
೮. ಕೆಳಗಿನ ಒಂದೊಂದು ಶಬ್ದವನ್ನು ಉಪಯೋಗಿಸಿ ಒಂದೊಂದು ವಾಕ್ಯಮಾಡಿರಿ:

ಸಿಲ್ದಾಣ, ಅಚ್ಚರಿ, ಮರುಗು, ಪಶ್ಚಾತ್ತಾಪ.

## ೩೦. ಪಣತಿ



ನಾಳೆ ದೀಪಾವಳಿಹಬ್ಬ. ಸಾಲೆಯಲ್ಲಿ ದೀಪೋತ್ಸವ ಮಾಡಬೇಕೆಂದು ಗುರುಗಳೂ ಬಾಲಕರೂ ಮೊದಲೇ ಗೊತ್ತು ಮಾಡಿದ್ದರು. ಅದರಿಂದ ಇಂದು ಮಾಡಬೇಕಾದ ಕೆಲಸಗಳನ್ನು ಗುರುಗಳು ತಿಳಿಸಿದರು. ಮೊದಲು ಬಾಲಕರು ಪಣತಿಮಾಡುವ ಕೆಲಸವನ್ನು ಕೈಕೊಂಡರು.

ಗುರು:– ಬಾಲಕರೇ, ಈಗ ನೀವು ಪಣತಿಮಾಡಬೇಕಾಗಿದೆ. ಯಾವ ಯಾವ ಸಾಮಾನುಗಳು ಬೇಕು? ಆಲೋಚಿಸಿರಿ. ಅವುಗಳನ್ನು ಕೂಡಹಾಕೋಣ; ಆ ಮೇಲೆ ಕೆಲಸಕ್ಕೆ ತೊಡಗೋಣ.

ರಾಮ:– ಗುರುಗಳೇ, ಮಣ್ಣನ್ನು ತಂದರೆ ತೀರಿತು! ಮತ್ತೇನು ಬೇಕು?

ಭರಮ:– ನೀರು ಬೇಡವೇ? ಮಣ್ಣಿನಲ್ಲಿ ನೀರು ಹಾಕಿ ಕಲಸಿ ಮಿದುವು ಮಾಡಬೇಕು.

ಗುರು:– ಆಹುದು. ಮಣ್ಣು ನೀರು ಎರಡೂ ಬೇಕು. ಮಣ್ಣನ್ನು ಎಲ್ಲಿಂದ ತರೋಣ?

ಕೃಷ್ಣ:– ಸಾಲೆಯ ಮುಂದಿನ ತೋಟದಲ್ಲಿ ಸಾಕಷ್ಟು ಮಣ್ಣು ಆದೆ. ಅದನ್ನೇ ತಂದರಾಯಿತು.

ಸೋಮು:–ಗುರುಗಳೇ, ಕೆರೆಯು ಮಣ್ಣನ್ನು ತಂದರೆ ಒಳಿತಲ್ಲವೇ?

ಗುರು:– ಹೌದು. ಕೆರೆಯು ಮಣ್ಣು ಜಿಗುಟು. ಅದರಿಂದ ಪಣತಿ ಮಾಡುವದು ಬಲು ಹಗುರು.

ಶಿವು:– ಗುರುಗಳೇ, ಹಾಗಾದರೆ ಅದೇ ಮಣ್ಣನ್ನು ತರೋಣ. ಚೆಂದವಾದ ಪಣತಿಗಳನ್ನು ಮಾಡೋಣ.

ಗುರುಗಳೂ ಬಾಲಕರೂ ಊರಮುಂದಿನ ಕೆರೆಗೆ ನಡೆದರು. ಅಲ್ಲಿಯ ತಿಳಿ ಮಣ್ಣನ್ನು ಬುಟ್ಟಿಯಲ್ಲಿ ತುಂಬಿಕೊಂಡು ಸಾಲೆಗೆ ಮರಳಿ ಬಂದರು. ವರ್ಗದ ಹಿರಿಯುಮಣಿ ಶಂಕರ. ಅವನು ಒಂದು ಸಣ್ಣ ಬಿಂದಿಗೆಯಲ್ಲಿ ನೀರು ತಂದು ಹಾಕಿದನು. ರಾಮುನು ಮಣ್ಣನ್ನು ಕಲಿಸಿ ಎಲ್ಲರಿಗೂ ತುಸು ತುಸು ಹಂಚಿದನು. ಎಲ್ಲರೂ ಅದನ್ನು ಕೈಯಿಂದ ತಿಕ್ಕಿ ತಿಕ್ಕಿ ಹದಮಾಡಿದರು. ಹೀಗೆ ಮಿದುವುಮಾಡಿದ ಮಣ್ಣಿನಿಂದ ಅವರು ಪಣತಿ ಮಾಡತೊಡಗಿದರು. ಮೊದಲು ಗುರುಗಳು ಪಣತಿ ಮಾಡುವದನ್ನು ಎಲ್ಲರಿಗೂ ತೋರಿಸಿದರು. ಅದರಂತೆ ಬಾಲಕರು ಮಾಡುವಾಗ ಅವರಿಗೆ ಸಹಾಯ ಮಾಡಿದರು. ಎಲ್ಲರೂ ತಮ್ಮ ತಮ್ಮ ಪಣತಿಗಳನ್ನು ಬಯಲಲ್ಲಿ ಒಣಗಹಾಕಿದರು.

ಗುರು:– ಈಗ ನೀವು ಮಾಡಿದ ಪಣತಿಗಳು ಸಂಜೆಗೆ ಒಣಗುವವು. ಆಗ ಅವನ್ನು ಹೇಗೆ ಸುಡಬೇಕೆಂಬದನ್ನು ನಿಮಗೆ ತೋರಿಸುವೆ. ನಾಳೆ ಅವು ಉಪಯೋಗಕ್ಕೆ ಬರುವವು.

ರಾಮು:– ಗುರುಗಳೇ, ಈ ಪಣತಿಗಳು ಪೇಟೆಯಲ್ಲಿ ಸಿಗುವದಿಲ್ಲವೇ ?

ಗುರು:– ನಮ್ಮ ಕುಂಬಾರ ಕರಿಯಪ್ಪನ ಮನೆಯಲ್ಲಿ ಬೇಕಾದಷ್ಟು ಸಿಗುತ್ತವೆ.

ಕೃಷ್ಣ:–ಗುರುಗಳೇ, ಕರಿಯಪ್ಪನು ಮತ್ತೆ ಏನೇನು ಮಾಡುವನು?

ಗುರು:– ಗಡಿಗೆ, ಮುಚ್ಚಳ, ಹೂಜಿ, ಹರವಿ, ಕೊಡ, ಬಾನಿ, ಹಂಚು ಮೊದಲಾದ ಸಾಮಾನುಗಳನ್ನು ಮಾಡುವನು.

ಅವನು ತರತರದ ಪಾತ್ರೆಗಳನ್ನು ತಿಗರಿಯ ಸಹಾಯದಿಂದ ಮಾಡುವನು. ನಾಳೆ ಅವನ ಮನೆಗೆ ನಾವೆಲ್ಲರೂ ಹೋಗೋಣ, ಅವನ ಎಲ್ಲ ಕೆಲಸಗಳನ್ನು ನೋಡಿಕೊಂಡು ಬರೋಣ.

ಅಭ್ಯಸನಗಳು:–

೧. ಬಾಲಕರು ಯಾವ ಕೆಲಸಮಾಡಬೇಕೆಂದು ಗೊತ್ತುಮಾಡಿದ್ದರು ?

೨. ಯಾವ ಯಾವ ಸಾಮಾನುಗಳನ್ನು ಕೂಡಹಾಕಿದರು ?

೩. ಪಣತಿಮಾಡಲು ಎಂಥ ಮಣ್ಣು ಬೇಕು ?

೪. ಕುಂಬಾರ ಕರಿಯಪ್ಪನು ಯಾವ ಯಾವ ಸಾಮಾನುಗಳನ್ನು ಮಾಡುವನು ?

೫. ಕುಂಬಾರ ಕರಿಯಪ್ಪನು ಯಾತರ ಸಹಾಯದಿಂದ ತರತರದ ಪಾತ್ರೆಗಳನ್ನು ಮಾಡುವನು ?

೬. ಪಣತಿಯ ಬಗ್ಗೆ ನಿಮಗೆ ಗೊತ್ತಿದ್ದ ಸಂಗತಿಗಳನ್ನು ಬರೆಯಿರಿ.

೭. ಕೆಳಗಿನ ಶಬ್ದಗಳ ಅರ್ಥ ಬರೆಯಿರಿ:
ದೀಪೋತ್ಸವ, ಹದಮಾಡು, ತಿಗರಿ, ಕುಂಬಾರ, ಹಂಚು.

೮. ಕುಂಬಾರ ಮಣ್ಣಿನಿಂದ ಗಡಿಗೆ ಮಾಡುವನು. ಇದರಂತೆ ಕೆಳಗಿನ ವಾಕ್ಯಗಳನ್ನು ಪೂರ್ಣ ಮಾಡಿರಿ:

ಅ) ಕಮ್ಮಾರ——— ಕುಡುಗೋಲ ಮಾಡುವನು.

ಆ) ಪತ್ತಾರ——— ಆಭರಣ ಮಾಡುವನು.

ಇ) ಬಡಿಗ ಕಟ್ಟಿಗೆಯಿಂದ——— ಮಾಡುವನು.

ಈ) ನೇಕಾರ ನೂಲಿನಿಂದ ——— ನೆಯ್ಯುವನು.

ಉ) ಸಿಂಪಿಗ——— ಟೊಪ್ಪಿಗೆ ಹೊಲಿಯುವನು.

## ೩೧. ಕಲ್ಲುಸಕ್ಕರೆ

ಕಲ್ಲುಸಕ್ಕರೆ ಕೊಳ್ಳಿರೋ! ನೀವೆಲ್ಲರು
ಕಲ್ಲುಸಕ್ಕರೆ ಕೊಳ್ಳಿರೋ!
ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು'
ಫುಲ್ಲಲೋಚನ ಶ್ರೀ ಕೃಷ್ಣನಾಮವೆಂಬ ॥ ೧ ॥

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳ್ ತುಂಬುವುದಲ್ಲ;
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ;
ಉತ್ತಮ ಸರಕಿದು ಅತಿಲಾಭ ಬರುವಂಥ

ನಷ್ಟ ಬೀಳುವುದಲ್ಲ; ನಾತ ಹುಟ್ಟುವುದಲ್ಲ;
ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ;
ಕಟ್ಟಿರುವೆಯು ತಿಂದು ಕಡಿಮೆಯಾಗುವುದಲ್ಲ;
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ॥ ೩ ॥

ಸಂತೆ ಸಂತೆಗೆ ಹೋಗಿ ಶ್ರಮಪಡಿಸುವುದಲ್ಲ;
ಸಂತೆಯೊಳಗೆ ಇಟ್ಟು ಮಾರುವುದಲ್ಲ;
ಸಂತತ ಭಕ್ತರ ನಾಲಗೆ ಸವಿಗೊಂಬ
ಕಾಂತ ಪುರಂದರ ವಿಠಲ ನಾಮವೆಂಬ ॥ ೪ ॥

— ಪುರಂದರ ದಾಸರು.

ಅಭ್ಯಾಸನಗಳು:—

೧. ಈ ಕವಿತೆಯಲ್ಲಿ ಏನನ್ನು ಕೊಳ್ಳಲು ಹೇಳಿದೆ ?
೨. ಇಲ್ಲಿ ಹೇಳಿದ ಕಲ್ಲುಸಕ್ಕರೆ ಯಾವದು ?
೩. ಪೇಟೆಯಲ್ಲಿ ಸಿಗುವ ಕಲ್ಲುಸಕ್ಕರೆಗೂ, ಕವಿತೆಯಲ್ಲಿಯ ಕಲ್ಲುಸಕ್ಕರೆಗೂ ಏನು ಅಂತರವಿದೆ ?

# ದೊಡ್ಡ ಕಪ್ಪೆ



ದೊಡ್ಡ ಕಪ್ಪೆಯನ್ನು ನೀವು ನೋಡಿರುವಿರಾ? ಕೆರೆ, ಬಾವಿ, ಹೊಳೆ, ಹಳ್ಳಗಳಲ್ಲಿ ಈ ಕಪ್ಪೆಯು ಇರುವದು. ಜಿಗಿಯುತ್ತಿರುವ ಕಪ್ಪೆಯನ್ನು ಮಳೆಗಾಲದಲ್ಲಿ ನಿಮ್ಮ ಮನೆಯ ಅಂಗಳದಲ್ಲಿ ಕೂಡ ನೀವು ನೋಡಿರಬಹುದು. ಇದರ ಮೈಮೇಲೆ ಗಂಟುಗಳಿರುವವು. ಈ ಗಂಟುಗಳು ಕಪ್ಪೆಯನ್ನು ಸಂಕಟದೊಳಗಿಂದ ಉಳಿಸಿಕೊಳ್ಳಲು ಸಹಾಯಮಾಡುವವು. ಈ ಗಂಟುಗಳಲ್ಲಿ ಬಿಳೇ ರಸವು ತುಂಬಿರುವದು. ಯಾವುದಾದರೂ ಪ್ರಾಣಿಯು ಇದನ್ನು ಕಚ್ಚಿದರೆ ಈ ರಸವು ಹೊರಬಿದ್ದು ಅದರ ಬಾಯಿಯನ್ನು ಕೆಡಿಸುವದು. ಕೂಡಲೇ ಅದು ಕಪ್ಪೆಯನ್ನು ಉಗುಳುವದು. ಪ್ರಾಣಿಯ ಬಾಯಿಯೊಳಗಿಂದ ಹೀಗೆಯೇ ಪಾರಾಗುವದು. ನೀವು ಇದಕ್ಕೆ ಅಂಜಬೇಡಿರಿ. ಇದು ಬಲು ಕುರೂಪಿ; ಆದರೆ ಅದು ನಿಮಗೆ ಅಪಾಯಮಾಡಲಾರದು.

ದೊಡ್ಡ ಕಪ್ಪೆ ನಿಮ್ಮ ಗೆಳೆಯ. ನಿಮಗೆ ಎಂದಾದರೂ ಗುಂಗಾಡು ಕಡಿದಿರುವದೇ? ಗುಂಗಾಡು ಕಡಿದರೆ ಚಳಿಜ್ವರ ಬಂದು ನೀವು ನರಳಬೇಕಾಗುವದು. ಇಂತಹ ಗುಂಗಾಡುಗಳನ್ನು ಈ ಕಪ್ಪೆ ತಿನ್ನುವದು. ನಿಮ್ಮ ಕೈತೋಟದಲ್ಲಿ ನೀವು ಹಚ್ಚಿದ ಹೂವಿನ

ಸಸಿಗಳನ್ನು ಕೀಡಿಗಳು ತಿಂದು ಹಾಳುಮಾಡುವವು. ಅಂತಹ ಕೀಡಿಗಳನ್ನು ಈ ಕಪ್ಪೆಯು ತಿನ್ನುವದು. ಓರ್ವ ಪ್ರಾಣಿ ಶಾಸ್ತ್ರಜ್ಞನು ಈ ಕಪ್ಪೆಯ ಹೊಟ್ಟೆಯನ್ನು ಕೊಯ್ದು, ಇದು ಎಂಬತ್ತು ಮೂರು ಪ್ರಕಾರದ ಬೇರೆಬೇರೆ ಜಾತಿಯ ಹುಳಗಳನ್ನು ತಿನ್ನುವದೆಂದು ಕಂಡು ಹಿಡಿದಿರುವನು.

ಒಂದು ಕಪ್ಪೆಯ ಹೊಟ್ಟೆಯಲ್ಲಿ ಐವತ್ತೈದು ಕೀಡಿಗಳಿದ್ದವು. ಪ್ರತಿದಿವಸ ಕಪ್ಪೆ ನಾಲ್ಕುಸಾರೆ ಹೊಟ್ಟೆತುಂಬಿಕೊಳ್ಳುವದು. ಮೂರು ತಿಂಗಳಲ್ಲಿ ಒಂದು ಕಪ್ಪೆ ಸುಮಾರು ಹತ್ತುಸಾವಿರ ಹುಳಗಳನ್ನು ತಿನ್ನುವದು. ಒಕ್ಕಲಿಗರಿಗೆ ಒಂದು ಕಪ್ಪೆ ವರ್ಷಕ್ಕೆ ಏನಿಲ್ಲೆಂದರೂ ೭೫ ರೂಪಾಯಿ ಉಳಿತಾಯ ಮಾಡಿಕೊಡುವದು. ಕಪ್ಪೆ ತಿನ್ನುವ ಕೆಲವು ಹುಳಗಳ ಚಿತ್ರಗಳನ್ನು ಇಲ್ಲಿ ತೋರಿಸಲಾಗಿದೆ.



ನೀವು ದೊಡ್ಡ ಕಪ್ಪೆಯನ್ನು ಕಂಡರೆ ಅದನ್ನು ಒಯ್ದು ನಿಮ್ಮ ಹೂದೋಟದಲ್ಲಿ ಇಡಿರಿ. ಅದಕ್ಕೆ ಒಂದು ಮನೆಯನ್ನು ಕಟ್ಟಿಕೊಡಿರಿ. ಮುಂದಿನ ಚಿತ್ರದಲ್ಲಿ ತೋರಿಸಿದಂತೆ ಅದರ ಮನೆ ಇರಬೇಕು. ಅದು ನಿಮ್ಮ ಹೂವು ಎಲೆಗಳನ್ನು ತಿಂದು ಕೆಡಿಸುವ ಹುಳಗಳನ್ನು ತಿನ್ನುವದು.



ಆದರಿಂದ ನಿಮ್ಮ ತೋಟದಲ್ಲಿ ಹೂವುಗಳು ಹೆಚ್ಚಾಗುವವು. ಸಸಿಗಳು ಬೆಳೆಯುವವು.

ಈ ಕಪ್ಪೆ ಹುಳಗಳನ್ನು ಹೇಗೆ ಹಿಡಿಯುವುದೆಂಬುದನ್ನು ಎಂದಾದರೂ ನೋಡಿರುವಿರಾ? ಇದು ತನ್ನ ನಾಲಿಗೆಯಿಂದ ಹುಳುಗಳನ್ನು ಹಿಡಿಯುವದು. ಇದರ ನಾಲಿಗೆಯ ಮೇಲೆ ಜಿಗಟು ರಸವಿರುವದು. ಹುಳಗಳು ಇದರ ಅಳವಿನೊಳಗೆ ಬಂದಕೂಡಲೆ ಮಿಂಚಿನ ವೇಗದಿಂದ ನಾಲಿಗೆಯನ್ನು ಚಾಚಿ ಹುಳಗಳನ್ನು ಹಿಡಿದು ನುಂಗುವದು.

ಈ ಕಪ್ಪೆ ಹೊಟ್ಟೆಬಾಕ ಪ್ರಾಣಿ. ಇದು ಬಹಳ ತಿನ್ನುವದು. ಆದರೂ ಕೂಳು ನೀರಿಲ್ಲದೆ ಬಹುಕಾಲ ಬದುಕಬಲ್ಲದು. ಇದು ಏನಿಲ್ಲೆಂದರೂ ಎರಡು ವರ್ಷಗಳ ವರೆಗೆ ಕೂಳು ನೀರು ಇಲ್ಲದೆ ಬದುಕಬಲ್ಲದೆಂದು ಪ್ರಾಣಿಶಾಸ್ತ್ರಜ್ಞರು ಕಂಡುಹಿಡಿದಿರುವರು. ಈ ಕಪ್ಪೆ ಬಲು ವಿಚಿತ್ರವಾದ ಪ್ರಾಣಿಯಲ್ಲವೇ?

ಇಂತಹ ಉಪಯುಕ್ತ ಪ್ರಾಣಿಯಾದ ಕಪ್ಪೆ ಹೆಚ್ಚಾಗಿ ಇರುವದು ವಿಹಿತವಲ್ಲವೇ? ಅದರ ಸಂತತಿಯು ಬಹಳವಾಗಿ ಬೆಳೆದರೆ ಅದರಿಂದ ನಮಗೆ ಬಹಳ ಸಹಾಯವಾಗುವದಿಲ್ಲವೇ? ಒಂದು

ಹೆಣ್ಣು ಕಪ್ಪೆ ವರ್ಷದಲ್ಲಿ ಹತ್ತುಸಾವಿರ ತತ್ತಿಗಳನ್ನು ಇಡುವದು. ಕಪ್ಪೆ ಸುಮಾರು ಇಪ್ಪತ್ತು ವರ್ಷ ಬದುಕುವದು. ಅಂದಮೇಲೆ ಅವು ಏಕೆ ಬಹಳವಾಗಿಲ್ಲವೆಂದು ನಿಮಗೆ ಆಶ್ಚರ್ಯವೆನ್ನಿಸುವದಿಲ್ಲವೇ? ಹೌದು; ಅವು ಬಹಳವಾಗಿ ಬೆಳೆಯಬಹುದಾಗಿತ್ತು; ಆದರೆ ಕಪ್ಪೆಗೆ ವೈರಿಗಳು ಬಹಳ. ಹದ್ದು, ಕಾಗೆ, ಹಾವು, ಕೋಳಿಗಳು ಅವುಗಳನ್ನು ತಿನ್ನುತ್ತವೆ. ಅವುಗಳಿಂದ ನಮಗೆ ಎಷ್ಟು ಹಿತವಾಗುವದೆಂಬುದನ್ನು ಅರಿಯದ ಹುಡುಗರು ಅವನ್ನು ಕೊಲ್ಲುವರು. ಕಪ್ಪೆಗಳ ಸಂಖ್ಯೆ ಹೆಚ್ಚಾಗಿ ಬೆಳೆಯುವದು ನಮಗೆ ಹಿತಕರ. ಕೆಳಗಿನ ನಿಯಮಗಳನ್ನು ನೀವು ಪಾಲಿಸಿದರೆ ಕಪ್ಪೆಗಳ ಸಂಖ್ಯೆ ಬೆಳೆಯುವದು.

(೧) ಕಪ್ಪೆಗಳನ್ನು ಎಂದೂ ಕೊಲ್ಲಬೇಡಿರಿ.
(೨) ಕಪ್ಪೆಗಳನ್ನು ಹಿಡಿಯಬೇಡಿರಿ. ಸುರಕ್ಷಿತ ಸ್ಥಳಗಳಲ್ಲಿ ಅವನ್ನು ಇರಗೊಡಿರಿ.
(೩) ಕಟ್ಟಿಗೆಯ, ಹಲಿಗೆಗಳ, ಹಾಸುಗಲ್ಲುಗಳ ಕೆಳಗೆ ಅವು ಮನೆಮಾಡಿಕೊಳ್ಳುವಂತೆ ಅನುಕೂಲ ಮಾಡಿಕೊಡಿರಿ. ಬಿಸಿಲಿನಲ್ಲಿ ಅವು ಇಂತಹ ಸ್ಥಳಗಳಲ್ಲಿ ಇರುವವು.
(೪) ಕಪ್ಪೆಗಳಿಂದ ನಮಗಾಗುವ ಉಪಕಾರವನ್ನು ಜನರಿಗೆ ಹೇಳಿರಿ. ಅವರೂ ಕೂಡ ಅವುಗಳನ್ನು ರಕ್ಷಿಸುವರು,

ಅಭ್ಯಸನಗಳು:—

೧. ಕಪ್ಪೆಗಳ ವೈರಿಗಳು ಯಾವ ಪ್ರಾಣಿಗಳು ?
೨. ನಿಮ್ಮ ಹೂದೋಟದೊಳಗಿನ ಹುಳಗಳನ್ನು ಯಾವದು ಕಡಿಮೆ ಮಾಡುವದು ?
೩. ಕಪ್ಪೆಗಳು ಎಷ್ಟು ಆಹಾರವನ್ನು ತಿನ್ನುವವು ?
೪. ಕಪ್ಪೆಗಳ ಆಹಾರ ಏನು ?
೫. ಕಪ್ಪೆಗಳು ಎಷ್ಟು ವರ್ಷ ಬದುಕುವವು ?
೬. ಕಪ್ಪೆಗಳ ಸಂಖ್ಯೆ ಹೆಚ್ಚಾಗಬೇಕಾದರೆ, ನಾವು ಯಾವ ನಿಯಮಗಳನ್ನು ಪಾಲಿಸಬೇಕು ?
೭. ಕೆಳಗೆ ಹೇಳಿದ ಪ್ರಾಣಿಗಳು ನಮಗ ಹೇಗೆ ಉಪಯೋಗವಾಗುವವು ?
ಆವೆ, ಮೀನು, ಹಾವು, ಮುಂಗುಲಿ, ಹಲ್ಲಿ

## ೩೩. ಒಕ್ಕಲಿಗರ ನೀಲಪ್ಪ

ಕೊಪ್ಪದ ನೀಲಪ್ಪ ಹೆಸರಾದ ಒಕ್ಕಲಿಗ. ಅವನ ಸಾಗುವಳಿ, ಬಿತ್ತಿಗೆ ಮುಂತಾದ ಹೊಲಗೆಲಸಗಳನ್ನು ನೆರೆಹೊರೆಯ ಒಕ್ಕಲಿಗರು ನೋಡಲು ಬರುತ್ತಿದ್ದರು. ಅಲ್ಲಿ ನೋಡಿಕೊಂಡು ಹೋಗಿ, ತಮ್ಮ ಹೊಲಗಳಲ್ಲಿ ತಕ್ಕ ಸುಧಾರಣೆಗಳನ್ನು ಮಾಡುತ್ತಿದ್ದರು. ನೀಲಪ್ಪನ ಒಕ್ಕಲುತನ ಕೊಪ್ಪದ ಭಾಗದಲ್ಲಿ ಹೆಸರಾಗಿತ್ತು. ನೀಲಪ್ಪ ಮೈ ಮುರಿದು ದುಡಿಯುವವ. ಆತನಿಗೆ ತನ್ನ ಕೆಲಸವನ್ನು ತಾನೇ ಮಾಡಬೇಕೆಂಬ ಹುಮ್ಮಸ ಬಹಳ.

ಒಮ್ಮೆ ನೀಲಪ್ಪ ಕಿತ್ತೂರಿಗೆ ಹೊರಟನು. ಊರವರಿಗೆಲ್ಲ ಸೋಜಿಗವಾಯಿತು; ಯಾಕೆಂದರೆ ಅವನು ಎಂದೂ ಪರವೂರಿಗೆ ಹೋದವನಲ್ಲ. ನೀಲಪ್ಪನು ತನ್ನ ತಂಗಿ ಮಲ್ಲಕ್ಕನನ್ನು ಪಂಚಮಿಯ ಹಬ್ಬಕ್ಕೆ ಕರೆದುಕೊಂಡು ಬರಬೇಕಾಗಿತ್ತು, ಮತ್ತೆ ಯಾರನ್ನೂ ಕಳಿಸುವಂತೆ ಇರಲಿಲ್ಲ.

ನೀಲಪ್ಪ ಕಿತ್ತೂರಿಗೆ ಹೊರಡುವ ದಿನ ತನ್ನ ಮಗ ಭರಮನನ್ನು ಕರೆದನು. "ತಮ್ಮಾ, ನಾನು ಎರಡು ಮೂರು ದಿನಗಳಲ್ಲಿ ಮರಳಿ ಬರುವೆನು. ಕಮತದ ಕೆಲಸಗಳನ್ನು ಸರಿಯಾಗಿ ನೋಡಿಕೊಳ್ಳು; ಕೋಳಿಕೂಗುವ ಹೊತ್ತಿಗೆ ಆಳುಗಳು ಏಳಬೇಕು. ಹೊತ್ತು ಮೂಡುವ ಮುಂಚೆ ಗಳೆಗಳು ಹೊಲದಲ್ಲಿ ಇರಬೇಕು. ಹೊಲದಲ್ಲಿ ದಿನವೂ ಆಗ ತಕ್ಕಷ್ಟು ಕೆಲಸವು ಆಗಬೇಕು; ಇದನ್ನೆಲ್ಲ ನೋಡು." ಹೀಗೆ ಒಂದೇ ಎರಡೇ ಹಲವು ಮಾತುಗಳನ್ನು ಹೇಳಿ ಊರಿಗೆ ಹೋದನು.

ಮರುದಿನವೇ ಜಡಿಮಳೆ ಹಿಡಿಯುವ ಲಕ್ಷಣವು ತೋರಹತ್ತಿತು. ಆಗಲೇ ನೀಲಪ್ಪನಿಗೆ ಚಿಂತೆಯುಂಟಾಯಿತು; ಯಾಕೆಂದರೆ, ಪಂಚಮಿಯ ಮುಂದಿನ ಜಡಿಮಳೆ ಮಲೆನಾಡಿಗೆ ಮಹತ್ವದ್ದು. ಬತ್ತದ ಗದ್ದೆಗಳಿಗೆ ನೀರು ಕಟ್ಟುವದಕ್ಕೆ ಇದೇ ಸಮಯ. ಭರಮನಾಗಲಿ, ಆಳುಗಳಾಗಲಿ ಗದ್ದೆಗಳಿಗೆ ನೀರು ಕಟ್ಟುವ ಕೆಲಸವನ್ನು ಸರಿಯಾಗಿ ಮಾಡುವರೆಂದು ನೀಲಪ್ಪನಿಗೆ ಅನಿಸಲಿಲ್ಲ.

ಇತ್ತ ಕಿತ್ತೂರಿಗೆ ನೀಲಪ್ಪನು ಅಪರೂಪವಾಗಿ ಬಂದವನು. ಎರಡು ದಿನ ಇದ್ದು, ಹೋಗಬೇಕೆಂದು ಮಲ್ಲಕ್ಕನ ಮನೆಯವರು ಆಗ್ರಹಮಾಡಿದರು. ಆದರೆ ನೀಲಪ್ಪನು ಒಪ್ಪಲಿಲ್ಲ. "ಈ ದಿನ ಮಳೆ ಹಿಡಿದಿದೆ; ಈ ಮಳೆಯಲ್ಲಿ ಮಲ್ಲಕ್ಕನನ್ನು ಕರೆದುಕೊಂಡು ಹೋಗುವದು ಬೇಡ. ನಾನೇ ಇನ್ನೆರಡು ದಿನಕ್ಕೆ ಮತ್ತೆ ಬರುವೆನು" ಎಂದು ಹೇಳಿ ಆಗಲೇ ನೀಲಪ್ಪನು ಕೊಪ್ಪಕ್ಕೆ ಹೊರಟುಬಿಟ್ಟನು.

ದಾರಿಯಲ್ಲಿ ಮಳೆ ಹೊಡೆಯತೊಡಗಿತು. ಊರತನಕ ಬರುವ ವರೆಗೆ ನೀಲಪ್ಪನಿಗೆ ಸಮಾಧಾನವಿಲ್ಲ; ಕೊಪ್ಪದ ಗಡಿಗೆ ಬಂದನು. ಮನೆಯ ಕಡೆಗೆ ಹೋಗಲಿಲ್ಲ. ಮೊದಲು ತನ್ನ ಗದ್ದೆಗಳ ಕಡೆಗೆ ನಡೆದನು. ಮಳೆ ಧೋ ಧೋ ಎಂದು ಸುರಿಯುತ್ತಿದೆ. ನೀಲಪ್ಪ ಗದ್ದೆಗಳಿಗೆ ನೀರು ಕಟ್ಟುತ್ತಿದ್ದಾನೆ. ಒಡ್ಡುಗಳು ಸೋರುವಲ್ಲಿ ಮೆಟ್ಟಿ, ಮೆಟ್ಟಿ ಬಿಗಿಮಾಡುತ್ತಿದ್ದಾನೆ. ಅವನ ಕೆಲಸವೆಲ್ಲ ಮುಗಿಯುತ್ತ ಬಂದಿದೆ. ಈ ಹೊತ್ತಿಗೆ ಸಮೀಪದ ಗದ್ದೆಗಳ ರೈತರು ನೀರು ಕಟ್ಟಲಿಕ್ಕೆ ಬರುತ್ತಿದ್ದಾರೆ. ಅವರು ತಮ್ಮತಮ್ಮೊಳಗೆ, "ನೀಲಪ್ಪ ಎಂಥ ಹೊತ್ತಿಗೆ ಊರಿಗೆ ಹೋಗಿರುವನಲ್ಲ! ಅವನ ಆಳುಗಳಾಗಲಿ, ಮಗನಾಗಲಿ, ನಮ್ಮ ಸಂಗಡ ಬರಬಾರದೇ! ಈ ಸಾರೆ ಬಿತ್ತಿದ ಬೆಳೆ ಆ ನೀಲಪ್ಪನಿಗೆ ಕೈಕೊಡುವಂತೆ ಕಾಣುತ್ತದೆ" ಎಂದು ಮಾತಾಡುತ್ತ ನಡೆದಿದ್ದಾರೆ.



ದಾರಿಯಲ್ಲಿಯೇ ನೀಲಪ್ಪನ ಗದ್ದೆಗಳು. ನೀಲಪ್ಪ ನೀರು ಕಟ್ಟಿ, ತಂಗಿ ಕಟ್ಟಿಕೊಟ್ಟ ಬುತ್ತಿಯನ್ನು ತಿನ್ನುತ್ತ ಗಿಡದ ಕೆಳಗೆ ಕುಳಿತಿದ್ದನು. ತಮಗಿಂತ ಮೊದಲು ಕೆಲಸಮುಗಿಸಿ ಕುಳಿತ ನೀಲಪ್ಪನನ್ನು ಕಂಡು ಅವರು ಸೋಜಿಗಬಟ್ಟರು. ನೀಲಪ್ಪನ ಒಕ್ಕಲತನ ಸುಮ್ಮಗೆ ಹೆಸರಾಗಿದೆಯೇ ?

ಅಭ್ಯಸನಗಳು:—

೧. ಜನರು ನೀಲಪ್ಪನ ಹೊಲವನ್ನು ನೋಡಲು ಯಾಕೆ ಹೋಗುತ್ತಿದ್ದರು ?
೨. ನೀಲಪ್ಪನು ಕಿತ್ತೂರಿಗೆ ಯಾಕೆ ಹೋದನು ?
೩. ಹೋಗುವಾಗ ಭರಮನಿಗೆ ಏನು ಹೇಳಿದನು ?
೪. ನೀಲಪ್ಪನು ಕಿತ್ತೂರಿಂದ ಕೊಪ್ಪಕ್ಕೆ ಬೇಗನೆ ಯಾಕೆ ಮರಳಿಬಂದನು ?
೫. ಬಂದ ಬಳಿಕ ನೀಲಪ್ಪನು ಹೊಲದಲ್ಲಿ ಯಾವ ಕೆಲಸ ಮಾಡಿದನು ?
೬. ನೀಲಪ್ಪನನ್ನು ಕಂಡು ಉಳಿದ ರೈತರಿಗೆ ಸೋಜಿಗವೇಕೆ ಆಯಿತು ?
೭. ಕೆಳಗಿನ ಶಬ್ದಗಳನ್ನು ಬಳಸಿದ ವಾಕ್ಯಗಳನ್ನು ಪಾಠದಲ್ಲಿ ಹುಡುಕಿ ಮೂರು ಸಾರಿ ಓದಿರಿ:
ಕಮತ, ಜಡಿಮಳೆ, ನೀರು ಕಟ್ಟು, ಕೈಕೊಡು.
೮. ಕೆಳಗಿನ ವಾಕ್ಯಗಳ ಜೋಡಿಗಳನ್ನು 'ಮತ್ತು' ಅಥವಾ 'ಆದರೆ' ಉಪಯೋಗಿಸಿ ಜೋಡಿಸಿರಿ:
ಅ) ರಾಮನು ಶಾಲೆಯಿಂದ ಬಂದನು; ರಾಮನು ಊಟಮಾಡಿದನು.
ಆ) ಸಂಗನು ಗೆಳೆಯನ ಮನೆಗೆ ಹೋದನು. ಗೆಳೆಯನು ಮನೆಯಲ್ಲಿ ಇದ್ದಿಲ್ಲ.
ಇ) ಕಲ್ಲನು ತೋಟಕ್ಕೆ ಹೋದನು. ಅವನು ಹೂಗಳನ್ನು ಹರಿದನು.
ಈ) ರಂಗನು ತಂದೆಗೆ ಹಣವನ್ನು ಕೇಳಿದನು. ತಂದೆಯು ಹಣವನ್ನು ಕೊಡಲಿಲ್ಲ.
೯. ಕತ್ತರಿ, ಕಸಬರಿಗೆ, ಸೂಜಿ, ಚಾಕು, ಕೀಲಿಕೈ ಈ ಸಾಮಾನುಗಳು ನಿಮ್ಮ ಹತ್ತಿರ ಅವೆ. ಕೆಳಗಿನ ಕೆಲಸ ಮಾಡುವಾಗ ನೀವು ಯಾವುದನ್ನು ಉಪಯೋಗಿಸುವಿರಿ ?
ಅ) ನೆಲ ಸ್ವಚ್ಛ ಮಾಡುವದು.
ಆ) ಬಾಗಿಲ ಕೀಲಿ ತೆಗೆಯುವದು.
ಇ) ಹಣ್ಣು ಹೆಚ್ಚುವದು.
ಈ) ಕಾಗದ ಕತ್ತರಿಸುವದು.
ಉ) ಅಂಗಿಗೆ ಗುಂಡಿ ಹಚ್ಚುವದು.

# ೩೪. ಹುಚ್ಚ ಕುರಿಯಮರಿ

ಒಬ್ಬ ಕುರುಬನು ತನ್ನ ಕುರಿಗಳನ್ನು ಬಹಳ ಪ್ರೀತಿಯಿಂದ ಸಲಹುತ್ತಿದ್ದನು. ಒಳಿತಾಗಿ ಹುಲ್ಲು ಬೆಳೆದ ಗದ್ದೆಗಳನ್ನು ಹಿಡಿದು ಅಲ್ಲಿ ತನ್ನ ಕುರಿಗಳನ್ನು ಮೇಯಿಸುವನು. ಮೂಡಗಾಳಿಯ ದಿವಸಗಳಲ್ಲಿ ಉದ್ದ ಗಳದಿಂದ ಗಿಡಗಳನ್ನು ಬಡಿದು, ತೊಪ್ಪಲನ್ನು ಉದುರಿಸಿ, ಕುರಿಗಳಿಗೆ ತಿನಿಸುವನು. ಹೊತ್ತುಹೊತ್ತಿಗೆ ಹಳ್ಳದ ತಿಳಿ ನೀರು ಕುಡಿಸುವನು. ಅಡವಿಯಲ್ಲಿ ಮೇಯುತ್ತ ನಿಂತಾಗ ಕೊಳಲು ಊದಿ ಅವುಗಳನ್ನು ಆನಂದಪಡಿಸುವನು. ಹೊತ್ತು ಮುಳುಗಿದ ಕೂಡಲೆ ಅವುಗಳನ್ನು ದಡ್ಡಿಯೊಳಗೆ ಹಾಕಿ, ಬಾಗಿಲು ಮುಚ್ಚುವನು. ನಾಯಿಗಳನ್ನು ಹೊರಗೆ. ಕಾವಲಿರಿಸಿ, ತಾನು ಹಿಂಡಿನೊಳಗೆ ಮಲಗುತ್ತಿದ್ದನು. ಬೆಳಗ್ಗೆ ಮತ್ತೆ ಅವುಗಳನ್ನೆಲ್ಲ ಹೊಡಕೊಂಡು ಹೋಗಿ, ದಿನದಂತೆ ಮೇಯಿಸಿಕೊಂಡು ಬರುವನು. ಈ ಪ್ರಕಾರ ಅವುಗಳನ್ನು ಹೊಟ್ಟೆಯ ಮಕ್ಕಳಂತೆ ಸಲಹುತ್ತಿದ್ದನು. ಅದರಿಂದ ಹಿಂಡು ದಿನದಿನಕ್ಕೆ ಬಲಿಯಹತ್ತಿತು.

ಆ ಹಿಂಡಿನೊಳಗೆ ಒಂದು ಹುಚ್ಚ ಕುರಿಯಮರಿಯು ಇತ್ತು. ಅದಕ್ಕೆ ಈ ರೀತಿ ಸೇರಲಿಲ್ಲ. ಒಂದು ದಿನ ಅದು ತನ್ನ ತಾಯಿಯ ಬಳಿಗೆ ಬಂದು: "ಅವ್ವಾ, ನಮ್ಮ ಒಡೆಯನು ದಿನಾಲು ಇರುಳು ನಮ್ಮನ್ನು ದಡ್ಡಿಯೊಳಗೆ ಹಾಕುತ್ತಾನೆ. ನಾಯಿಗಳನ್ನು ಹಾಕುವದಿಲ್ಲ. ನಮ್ಮ ಮೇಲೆಯೇ ಇಷ್ಟು ಬಲುಮೆ ಯಾಕೆ? ಬೆಳದಿಂಗಳು ಬಿದ್ದಾಗ ಅಡವಿಯಲ್ಲಿ ಅತ್ತಿತ್ತ ಅಡ್ಡಾಡುವದು ಎಂತಹ ಸೊಗಸು! ನಾನಂತೂ ಹೊತ್ತು ನೋಡಿಕೊಂಡು ಈ ದಡ್ಡಿಯೊಳಗಿಂದ ಓಡಿಹೋಗಬೇಕೆಂದು ಮಾಡಿದ್ದೇನೆ" ಎಂದು ಅಂದಿತು.

ಇದನ್ನು ಕೇಳಿ ಅದರ ತಾಯಿ:—"ಛೀ ಮರುಳೇ, ನಿನಗೆ ಇಂತಹ ಬುದ್ಧಿಯನ್ನು ಯಾರು ಕಲಿಸಿದರು? ನಮ್ಮ ಒಡೆಯನು ನಮ್ಮನ್ನು ಬಹಳ ಚೆನ್ನಾಗಿ ಸಾಕುತ್ತಾನೆ. ನಮಗೆ ಒಳಿತು ಆಗಬೇಕೆಂದು

ಆತನು ಹಗಲೂ ಇರುಳೂ ನಮ್ಮ ಕೂಡ ಕಷ್ಟಬಡುತ್ತಾನೆ. ತೋಳಗಳ ಕಾಟವು ನಮಗೆ ತಟ್ಟಬಾರದೆಂದು, ದಡ್ಡಿಯ ಸುತ್ತಲೂ ನಾಯಿಗಳ ಕಾವಲು ಇಡುತ್ತಾನೆ. ತಾನೂ ಇರುಳೆಲ್ಲ ಎಚ್ಚರಾಗಿರುವನು. ಅದರಿಂದ ನಾವು ಅಂಜಿಕೆಯಿಲ್ಲದೆ ಬೆಳತನಕ ನಿದ್ದೆಮಾಡುವೆವು. ಮನಸಿಗೆ ಬಂದಂತೆ ತಿರುಗಾಡಿದರೆ, ಕೇಡು ಆದೀತು" ಎಂದು ನುಡಿಯಿತು.

ತಾಯಿಯ ಮಾತಿಗೆ ಆ ಮರಿಯು ಕಿವಿಗೊಡಲಿಲ್ಲ. ಮರುದಿನ ಸಂಜೆಗೆ, ಉಳಿದ ಕುರಿಗಳ ಕೂಡ ದಡ್ಡಿಗೆ ಹೋಗಲಿಲ್ಲ. ಕುರುಬನ ಕಣ್ಣು ತಪ್ಪಿಸಿ, ಒಂದು ಕಂಟಿಯ ಮರೆಗೆ ಅಡಗಿ ನಿಂತಿತು. ಕುರಿಗಳೆಲ್ಲ ದೂರ ಹೋದ ಬಳಿಕ ಅದು ಮೆಲ್ಲನೆ ಹೊರಬಿದ್ದು, ಅಡವಿಯೊಳಗೆ ಅತ್ತಿತ್ತ ಅಡ್ಡಾಡಹತ್ತಿತು.

ಆ ಹೊತ್ತು ಹುಣ್ಣಿವೆಯಾದುದರಿಂದ ಹಿಟ್ಟುಚೆಲ್ಲಿದ ಹಾಗೆ ಬೆಳದಿಂಗಳು ಬಿದ್ದಿತ್ತು. ಮರಿಯು ಉಲ್ಲಾಸದಿಂದ ಮನಸಿಗೆ ಬಂದಂತೆ ಜಿಗಿದಾಡಿತು. ಎದುರಿಗೆ ಕಾಣುವ ಒಂದು ಮೊರಡಿಯ ಮೇಲೆ ಹತ್ತಿತು. ಸುತ್ತುಮುತ್ತು ನೋಡಿ ಮನಸಿನೊಳಗೆ, "ನಾನು ಇಂದು ಧೈರ್ಯದಿಂದ ತಪ್ಪಿಸಿಕೊಂಡು ಬಂದದ್ದು ಒಳ್ಳೆಯದಾಯಿತು; ಇಲ್ಲದಿದ್ದರೆ ಉಳಿದ ಕುರಿಗಳಂತೆ ಬೆಳತನಕ ದಡ್ಡಿಯೊಳಗೆ ಬೀಳಬೇಕಾಗುತ್ತಿತ್ತು. ಈ ಸುಖವು ದೊರಕುತ್ತಿದ್ದಿಲ್ಲ" ಎಂದು ಹಿರಿಹಿರಿ ಹಿಗ್ಗಿತು. ಅಷ್ಟರಲ್ಲಿ ಓರೆಯೊಳಗಿಂದ ಒಂದು ತೋಳವು ಹಸಿದು ಬೇಟೆಯನ್ನು ಹುಡುಕುತ್ತ ಅಲ್ಲಿಗೆ ಬಂದಿತು. ಅದನ್ನು ಕಂಡಕೂಡಲೆ ಮರಿಯ ಕೈಕಾಲೇ ಹೋದವು.

ಆಗ ತನ್ನ ಮನದೊಳಗೆ–"ನಾನು ಎಂತಹ ತಿಳಿಗೇಡಿ! ನನ್ನ ತಾಯಿಯ ಮಾತು ಕೇಳಿದ್ದರೆ ನನಗೆ ಇಂತಹ ಸಂಕಟವು ಬರುತ್ತಿದ್ದಿಲ್ಲ. ಎಲ್ಲರ ಕೂಡ ನಾನೂ ದಡ್ಡಿಯೊಳಗೆ ಬೆಚ್ಚಗೆ ಮಲಗುತ್ತಿದ್ದೆ. ಇನ್ನು ನನ್ನ ತಾಯಿಯ ಮೋರೆಯನ್ನು ಹೇಗೆ ಕಂಡೇನು!" ಎಂದು ಹಳಹಳಿಸಿ

ಆಳಹತ್ತಿತು. ಅಷ್ಟರೊಳಗೆ ಆ ತೋಳವು ಈ ಮರಿಯ ನಾತ ಹಿಡಿಯುತ್ತ ಹತ್ತಿರ ಬಂದಿತು. ಟಣ್ಣನೆ ಹಾರಿ ಅದನ್ನು ಬಾಯೊಳಗೆ ಕಚ್ಚಿಕೊಂಡು ಹೋಯಿತು.

ಆ ಮರಿಯು ತನ್ನ ತಾಯಿಯ ಮಾತು ಕೇಳಿದ್ದರೆ, ಅದಕ್ಕೆ ಕೇಡು ಆಗುತ್ತಿದ್ದಿಲ್ಲ. ತಾಯಿ ತಂದೆಗಳ ಮಾತು ಮೀರಿ ನಡೆದರೆ ಈ ಹಾಡು ಆಗುವದು.

ಅಭ್ಯಸನಗಳು:—

೧. ಕುರೀಮರಿ ತನ್ನ ತಾಯಿಯ ಮಾತು ಏಕೆ ಕೇಳಲಿಲ್ಲ ?

೨. ತಾಯಿತಂದೆಗಳ ಮಾತು ಕೇಳದಿದ್ದರೆ ಏನಾಗುವದು ?

೩. ಕುರುಬನು ಕುರಿಗಳನ್ನು ಅಷ್ಟು ಜತನದಿಂದ ಏಕೆ ಕಾಯುತ್ತಿದ್ದನು ?

೪. ಹುಚ್ಚ ಕುರೀಮರಿಯ ಕಥೆಯನ್ನು ನಿಮ್ಮ ಮಾತುಗಳಲ್ಲಿ ಹೇಳಿರಿ.

೫. ಕೆಳಗಿನ ಶಬ್ದಗಳ ಅರ್ಥವನ್ನು ಹೇಳಿರಿ:
ಸಲಹು, ಮೂಡಗಾಳಿ, ದಡ್ಡಿ, ಇರುಳು, ಬಲುಮೆ, ಒಳಿತು, ಕಾಟ, ಉಲ್ಲಾಸ, ಧೈರ್ಯ, ಹಿಗ್ಗು, ಓರೆ.

೬. ಕೆಳಗಿನ ಶಬ್ದಗಳ ಗುಂಪುಗಳಲ್ಲಿ ಒಂದು ಶಬ್ದ ಸರಿಯಾಗಿ ಹೊಂದುವದಿಲ್ಲ. ಅದು ಯಾವದೆಂಬುದನ್ನು ಹುಡುಕಿರಿ. ಕಾರಣ ಕೊಡಿರಿ.

ಅ) ನೀಲಿ, ಕೆಂಪು, ಪುಸ್ತಕ, ಹಸರು, ಹಳದಿ.

ಆ) ಮಾವು, ಕಿತ್ತಳೆ, ನೇರಲ, ಹುಡುಗ, ಅಂಬು, ಪೇರಲ.

ಇ) ಶುಕ್ರವಾರ, ಶನಿವಾರ, ಕಾರವಾರ, ರವಿವಾರ, ಸೋಮವಾರ.

ಈ) ನಾಯಿ, ಕುದುರೆ, ಆಕಳು, ಹುಲಿ, ಕುರಿ.

ಉ) ಗಿಳಿ, ಕಾಗೆ, ಗುಬ್ಬಿ, ಹುಡಿಗೆ, ನವಿಲು.

ಊ) ನಾಗರಪಂಚಮಿ, ಹುಸರೆ, ಗಣೇಶ ಚತುರ್ಥಿ, ಮನುಷ್ಯ.

ಎ) ಹುಣಿಸೆಮರ, ಆಲದ ಮರ, ಗಿಳಿ, ಬೇವಿನ ಮರ.

ಏ) ಮಲ್ಲಿಗೆ, ಸೇವಂತಿಗೆ, ತೆಂಗು, ಗುಲಾಬಿ, ಕಮಲ.

## ೩೫. ವಚನಗಳು

ಅನ್ನವನು ನೀಡುವದು ನನ್ನಿಯನು ನುಡಿಯುವದು
ತನ್ನಂತೆ ಪರರ ಬಗೆದೊಡೆ ಕೈಲಾಸ
ಬಿನ್ನಣಾವಕ್ಕು ಸರ್ವಜ್ಞ. ॥ ೧ ॥

ಆಳಾಗ ಬಲ್ಲವನು ಆಳುವನು ಅರಸಾಗಿ
ಆಳಾಗಿ ಬಾಳಲರಿಯುದವ ಕಡೆಯಲ್ಲಿ
ಹಾಳಾಗಿ ಹೋಹ ಸರ್ವಜ್ಞ. ॥ ೨ ॥

ಜಾತಿ ಹೀನನ ಮನೆಯ ಜೋತಿ ತಾ ಹೀನವೇ?
ಜಾತಿ ವಿಜಾತಿಯೆನಬೇಡ ದೇವನೊಲಿ-
ದಾತನೇ ಜಾತ ಸರ್ವಜ್ಞ. ॥ ೩ ॥

ಬಲ್ಲವರ ಒಡನಾಟ ಬೆಲ್ಲವನು ಮೆದ್ದಂತೆ
ಅಲ್ಲದಹುದೆಂಬ ಅಜ್ಞಾನಿಯೊಡನಾಟ
ಕಲ್ಲ ಹಾಯ್ದಂತೆ ಸರ್ವಜ್ಞ. ॥ ೪ ॥

ತಂದೆ ನೀನು, ತಾಯಿ ನೀನು, ಬಂಧು ನೀನು
ಬಳಗ ನೀನು, ಎನಗೆ ನೀನಲ್ಲದೆ ಮತ್ತಾರು
ಇಲ್ಲವಯ್ಯಾ, ಕೂಡಲ ಸಂಗಮ ದೇವಾ! ॥ ೫ ॥

ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ.
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ.
ಇದೇ ನಮ್ಮ ಕೂಡಲಸಂಗಮ ದೇವರನೊಲಿಸುವ ಪರಿ! ॥ ೬ ॥

ಅಭ್ಯಸನಗಳು:—

೧) ೧ನೆಯ ಪದ್ಯದಲ್ಲಿ ನಾವು ಏನೇನು ಮಾಡಬೇಕೆಂದು ಹೇಳಿದೆ?
೨) 'ಅರಸನಾಗುವ ಮುಂಚೆ ಆಳಾಗಬೇಕು' ಎಂದರೇನು?
೩) ಎಂಥವರ ಗೆಳೆತನ ಮಾಡಬೇಕು?
೪) ದೇವರನ್ನು ಮೆಚ್ಚಿಸುವ ಗುಣಗಳು ಯಾವವು?

## ೩೬. ನೀಲಿ ಬಣ್ಣದ ನರಿ

ಒಂದು ಪಟ್ಟಣದ ಹೊರಗೆ ಒಂದು ನರಿಯು ಗುದ್ದಿನೊಳಗೆ ವಾಸಿಸುತ್ತಿತ್ತು. ಅದರ ಹೆಸರು ಚಂಡರವ. ಒಮ್ಮೆ ಆಹಾರ ಹುಡುಕುತ್ತ ರಾತ್ರಿಯಲ್ಲಿ ಅದು ಊರೊಳಗೆ ಹೊಕ್ಕಿತು. ಬಹಳ ಹಸಿದಿತ್ತು. ಅತ್ತಿತ್ತ ಆಹಾರವನ್ನು ಹುಡುಕುವದಕ್ಕಾಗಿ ಅಲೆದಾಡುತ್ತಿತ್ತು. ಆಗ ಊರೊಳಗಿನ ನಾಯಿಗಳು ಅದನ್ನು ಕಂಡು ಬೊಗಳುತ್ತ ಬೆನ್ನಟ್ಟಿದವು. ಈ ಗದ್ದಲಕ್ಕೆ ಜನರು ಎದ್ದರು. ಬೊಣ್ಣೆ ಹಿಡಿದುಕೊಂಡು ಅವರೂ ಅದರ ಬೆನ್ನಟ್ಟಿದರು.

ನಾಯಿಗಳು ಕಡಿದವು, ಜನರು ಹೊಡೆದರು; ಅದರಿಂದ ನರಿ ಬಹಳ ಅಂಜಿತು. ಹೇಗಾದರೂ ಜೀವವನ್ನು ಉಳಿಸಿಕೊಳ್ಳಬೇಕೆಂದು ದಿಕ್ಕುಗೆಟ್ಟು ಓಡಿತು. ಓಡುತ್ತ ಒಂದು ಸಮೀಪದಲ್ಲಿದ್ದ ನೀಲಗಾರನ ಮನೆಯನ್ನು ಹೊಕ್ಕಿತು. ಅಲ್ಲಿ ನೀಲಿ ಬಣ್ಣ ತುಂಬಿದ್ದ ಒಂದು ಹರವಿಯಲ್ಲಿ ಬಿದ್ದಿತು. ಬೆನ್ನಟ್ಟಿದ ನಾಯಿಗಳು ನರಿಯನ್ನು ಕಾಣದೆ, ಮರಳಿಹೋದವು.

ಚಂಡರವ ನರಿಯು ಆಯುಷ್ಯವು ಇನ್ನೂ ಇತ್ತು. ಅದು ಕಷ್ಟದಿಂದ ಹರವಿಯೊಳಗಿಂದ ಎದ್ದು, ಮೇಲೆ ಬಂದಿತು. ಆದರೆ ಅದರ ಮೈಯೆಲ್ಲ ನೀಲಿಬಣ್ಣದಿಂದ ಹೊಳೆಯ ತೊಡಗಿತು. ಅಡವಿಗೆ ಹೋಗಿ ನರಿಗಳ ಹಿಂಡನ್ನು ಸೇರಿತು. ನರಿಗಳು ಇದರ ಮೈಬಣ್ಣ ನೋಡಿ ಹೊಸದೊಂದು ಪ್ರಾಣಿ ಬಂದಿತೆಂದು ಗಾಬರಿಯಾದವು. ಅದು ಯಾವ ಪ್ರಾಣಿಯೆಂದು ಅವುಗಳಿಗೆ ತಿಳಿಯಲಿಲ್ಲ. ಅವು ಅಂಜಿ ಬೇರೆಕಡೆಗೆ ಹೋದವು.

ಈಗ ಚಂಡರವ ನರಿಯು ವಿಚಾರಮಾಡಿತು:—"ನನ್ನ ಈ ವಿಚಿತ್ರವಾದ ಬಣ್ಣಕ್ಕಾಗಿ ಇವು ಅಂಜಿ ಓಡುತ್ತವೆ. ಇವುಗಳನ್ನು ಸಮಾಧಾನ ಪಡಿಸಿ, ನನ್ನ ಹಿತವನ್ನು ಸಾಧಿಸಿಕೊಳ್ಳಬೇಕು."

ಚಂಡರವ ನರಿಯು ನರಿಗಳನ್ನೆಲ್ಲ ಕರೆದು, ಈ ಪ್ರಕಾರ ಹೇಳಿತು—"ಅಂಜಬೇಡಿರಿ; ಇಲ್ಲಿಯ ಪ್ರಾಣಿಗಳನ್ನೆಲ್ಲ ರಕ್ಷಿಸಲು ಇಂದ್ರದೇವನು ನನ್ನನ್ನು ಕಳುಹಿರುವನು. ಆತನ ಅಪ್ಪಣೆಯ

ಮೇಲಿಗೆ ನಾನು ಭೂಮಿಗಿಳಿದು ಬಂದಿರುವೆನು." ನರಿಗಳು ಹಿಗ್ಗಿದವು. ಅವು ಚಂಡರವ ನರಿಯ ಈ ಮಾತುಗಳನ್ನು ಕೇಳಿ, ಅಡವಿಯಲ್ಲಿ ಹೊಸರಾಜನು ಬಂದಿರುವನೆಂದು ಸುದ್ದಿಯನ್ನು ಹಬ್ಬಿಸಿದವು. ಸಂಜೆಯ ಮುಂದೆ ಹುಲಿ, ಸಿಂಹ, ಚಿರ್ಚು, ಕರಡಿ, ಮಂಗ, ಮೊಲ, ಚಿಗರೆ, ನರಿ ಮೊದಲಾದ ಪ್ರಾಣಿಗಳು ಒಂದು ಸ್ಥಳದಲ್ಲಿ ಕೂಡಿದವು; ಸಭೆಮಾಡಿದವು. ಚಂಡರವ ನರಿಯ ಅರಸೊತ್ತಿಗೆಯನ್ನು ಒಪ್ಪಿ, ಅದಕ್ಕೆ ನಮಸ್ಕಾರಮಾಡಿದವು.

ಪ್ರತಿದಿನ ಸಿಂಹವು ತನ್ನ ಹದನಾದ ಉಗುರುಗಳಿಂದ ಮದ್ದಾನೆಯನ್ನು ಹೊಡೆದು ಅದರ ಉತ್ತಮ ಮಾಂಸವನ್ನು ಈ ಅರಸನಿಗೆ ತಿನ್ನಲು ಕೊಡುತ್ತಿತ್ತು. ಹುಲಿಯೂ ಒಳ್ಳೆಯ ಚಿಗರೆಯ ಮಾಂಸವನ್ನು ಕೊಡುತ್ತಿತ್ತು. ಹೀಗೆ ಚಂಡರವ ನರಿಯು ಸಿಂಹ, ಹುಲಿ ಮೊದಲಾದ ದೊಡ್ಡ ಪ್ರಾಣಿಗಳಿಂದ ಸೇವೆಯನ್ನು ಸ್ವೀಕರಿಸಹತ್ತಿತು. ಬರಬರುತ್ತ ತನ್ನ ಜಾತಿಯ ನರಿಗಳನ್ನು ಸಮೀಪಕ್ಕೆ ಬರಗೊಡದೆ ದೂರ ಇಡತೊಡಗಿತು.

ಒಂದು ದಿನ ಬೆಳದಿಂಗಳು ಹಿಟ್ಟುಚೆಲ್ಲಿದ ಹಾಗೆ ಬಿದ್ದಿತ್ತು. ನರಿಗಳೆಲ್ಲ ಬೆಳದಿಂಗಳಲ್ಲಿ ಆಲೆದಾಡುತ್ತಿದ್ದವು. ಅವು ಆನಂದದಿಂದ ಕೂಗತೊಡಗಿದವು. ಚಂಡರವ ನರಿಗೂ ಕೂಗಬೇಕೆಂದು ಅನಿಸಿತು. ಜಾತಿಸ್ವಭಾವಕ್ಕನುಸರಿಸಿ, ಅದೂ ಕೂಗತೊಡಗಿತು. ಸಿಂಹ, ಹುಲಿ ಮೊದಲಾದವು ಇದರ ಕೂಗನ್ನು ಕೇಳಿದವು. ಅವು—"ಇದು ದೇವರು ಕಳಿಸಿಕೊಟ್ಟ ನಮ್ಮ ರಾಜನಲ್ಲ. ಇದೂ ಒಂದು ನರಿ! ಕ್ಷಿಲ್ಲ ಈ ನರಿಯು ಮೋಸಮಾಡಿತು!" ಎಂದು ಅನ್ನುತ್ತ ರೇಗಿದವು; ಗರ್ಜನೆಮಾಡಿದವು. ಓಡಿಹೋಗಿ ಚಂಡರವ ನರಿಯನ್ನು ಹಿಡಿದು ಕೊಂದವು.

ಪ್ರಶ್ನೆಗಳು:—

೧. ಜನರು ದೊಣ್ಣೆ ಹಿಡಿದು ಏನನ್ನು ಬೆನ್ನಟ್ಟಿದರು ?
೨. ಆ ನರಿಯು ಯಾವ ಬಣ್ಣದಿಂದ ಶೋಭಿಸಹತ್ತಿತು ?
೩. ಚಂಡರವ ನರಿಯು ಉಳಿದ ನರಿಗಳಿಗೆ ಏನು ಹೇಳಿತು ?
೪. ಚಂಡರವ ನರಿ ಯಾಕೆ ಕೂಗಿತು ?
೫. ಆ ನರಿಯ ಗತಿ ಏನಾಯಿತು ?

# ೩೭. ಶಿಷ್ಯರ ಪರೀಕ್ಷೆ



ಬಹಳ ವರ್ಷಗಳ ಹಿಂದಿನ ಕತೆ. ಆಗ ಕೌರವರೂ, ಪಾಂಡವರೂ ಇನ್ನೂ ಸಣ್ಣ ಹುಡುಗರು ಆಗಿದ್ದರು. ಬಿಲ್ಲು ಏರಿಸುವದನ್ನೂ ಬಾಣ ಹೊಡೆಯುವದನ್ನೂ ದ್ರೋಣಾಚಾರ್ಯರು ಅವರಿಗೆ ಕಲಿಸುತ್ತಿದ್ದರು. ಕೌರವರ ಗೆಳೆಯನಾದ ಕರ್ಣನೂ ಅವರ ಶಿಷ್ಯನಾದನು. ಬೇರೆ ಬೇರೆ ದೇಶಗಳ ಅರಸುಮಕ್ಕಳೂ ಶಿಷ್ಯರಾದರು. ಈ ಎಲ್ಲ ಶಿಷ್ಯರು ದಿನದಿನಕ್ಕೆ ಬಾಣಹೊಡೆಯುವದರಲ್ಲಿ ಜಾಣರಾಗುತ್ತ ನಡೆದರು. ಇವರಲ್ಲಿ ಎಲ್ಲಕ್ಕೂ ಹೆಚ್ಚಿನವನು ಯಾರು? ದ್ರೋಣಾಚಾರ್ಯರಿಗೆ ಇದನ್ನು ಪರೀಕ್ಷಿಸಿ ನೋಡುವ ಅಪೇಕ್ಷೆ ಆಯಿತು. ಶಿಷ್ಯರ ಪರೀಕ್ಷೆಗಾಗಿ ಒಂದು ದಿನವನ್ನು ಗೊತ್ತುಪಡಿಸಿದರು.

ಒಂದು ವಿಶಾಲವಾದ ಬಯಲು; ಅದರಲ್ಲಿ ಒಂದು ಎತ್ತರವಾದ ಮರ. ಅದರ ಒಂದು ಟೊಂಗೆಗೆ ಒಂದು ಪುಟ್ಟ ಹಕ್ಕಿ ತೂಗಹಾಕಿದೆ. ಬಾಣಹೊಡೆದು ಅದರ ಕುತ್ತಿಗೆಯನ್ನಷ್ಟೇ ಹಾರಿಸಬೇಕು. ಇದು ಕಠಿಣ ಪರೀಕ್ಷೆ. ಯಾರು ತೇರ್ಗಡೆಯಾಗುವರೋ ಎಂಬದನ್ನು ನೋಡಬೇಕೆಂದು ಬಹು ಜನರು ನೆರೆದರು.

ದ್ರೋಣರ ಶಿಷ್ಯರೆಲ್ಲ ಮೊದಲೇ ಅಲ್ಲಿಗೆ ಬಂದರು. ಎಲ್ಲರೂ ಬಿಲ್ಲು ಬಾಣಗಳನ್ನು ಸಜ್ಜು ಮಾಡಿಕೊಂಡು ನಿಂತರು. ಆದರೆ ಗುರುಗಳು ಅವರಲ್ಲಿ ಮೂವರನ್ನು ಮುಂದೆ ಕರೆದರು. ಈ ಮೂವರಲ್ಲಿ ಒಬ್ಬನು ದುರ್ಯೋಧನ, ಇನ್ನೊಬ್ಬನು ಕರ್ಣ, ಮತ್ತೊಬ್ಬನು ಅರ್ಜುನ. ಮೊದಲು ದುರ್ಯೋಧನನ ಸರತಿ. ಆತನು ಬಿಲ್ಲಿಗೆ ಬಾಣಹೂಡಿ, ಗುರಿಯಿಟ್ಟು ನಿಂತಿದ್ದಾನೆ. ಆಗ

ದ್ರೋಣರು:– ನಿನಗೆ ಹಕ್ಕಿ ಕಾಣಿಸುತ್ತಿದೆಯೇ?

ದುರ್ಯೋಧನ:– ಹೌದು, ಹಕ್ಕಿ ಕಾಣಿಸುತ್ತಿದೆ.

ದ್ರೋಣ:– ನಿನಗೆ ಟೊಂಗೆ ಕಾಣಿಸುತ್ತಿದೆಯೇ?

ದುರ್ಯೋಧನ:– ಹೌದು, ಟೊಂಗೆ ಕಾಣಿಸುತ್ತಿದೆ.

ದ್ರೋಣ:– ಎಲೆ ಕಾಣಿಸುತ್ತಿವೆಯೇ?

ದುರ್ಯೋಧನ:– ಹೌದು, ಎಲೆ ಕಾಣಿಸುತ್ತಿವೆ.

ದ್ರೋಣ:– ಒಳ್ಳೆಯದು ದುರ್ಯೋಧನಾ, ಸ್ವಲ್ಪ ಆಚೆಗೆ ಕುಳಿತುಕೊಳ್ಳು.

ಈಗ ಕರ್ಣನ ಸರತಿ; ಕರ್ಣಾ, ಹಕ್ಕಿ ಕಾಣಿಸುತ್ತಿದೆಯೇ?

ಕರ್ಣ:– ಹೌದು, ಕಾಣಿಸುತ್ತಿದೆ.

ದ್ರೋಣ:– ಹಕ್ಕಿಯ ಕಾಲು ಕಾಣಿಸುತ್ತಿವೆಯೇ?

ಕರ್ಣ:– ಹೌದು, ಕಾಲು ಕಾಣಿಸುತ್ತಿವೆ.

ದ್ರೋಣ:–ಒಳ್ಳೆಯದು ಕರ್ಣಾ, ಸ್ವಲ್ಪ ಆಚೆಗೆ ಕುಳಿತುಕೊಳ್ಳು. ಇನ್ನು ಅರ್ಜುನನ ಸರತಿ.

ಅರ್ಜುನಾ, ಹಕ್ಕಿ ಕಾಣಿಸುತ್ತಿದೆಯೇ?

ಅರ್ಜುನ:– ಇಲ್ಲ, ಹಕ್ಕಿಯು ಕಾಣಿಸುವದಿಲ್ಲ.

ದ್ರೋಣ:– ಹಕ್ಕಿಯ ಪುಚ್ಛವು ಕಾಣಿಸುವದೇ?

ಅರ್ಜುನ:– ಇಲ್ಲ, ಪುಚ್ಛವು ಕಾಣಿಸುವದಿಲ್ಲ.

ದ್ರೋಣ:– ಹಕ್ಕಿಯ ಚುಂಚು ಕಾಣಿಸುವದೇ?

ಅರ್ಜುನ:– ಇಲ್ಲ, ಚುಂಚು ಕಾಣಿಸುವದಿಲ್ಲ.

ದ್ರೋಣ:– ಹಾಗಾದರೆ, ನಿನಗೆ ಏನು ಕಾಣಿಸುತ್ತಿದೆ?

ಅರ್ಜುನ:– ಹಕ್ಕಿಯ ಕುತ್ತಿಗೆಯಷ್ಟೇ ಕಾಣಿಸುತ್ತಿದೆ.

ದ್ರೋಣ:- ಬೇರೆ ಏನೂ ಕಾಣಿಸುವದಿಲ್ಲವೇ?

ಅರ್ಜುನ:- ಬೇರೆ ಏನೂ ಕಾಣಿಸುವದಿಲ್ಲ.

ದ್ರೋಣ:- ಹಾಗಾದರೆ, ಬಾಣವನ್ನು ಬಿಡು.

ಅರ್ಜುನನು ಕೂಡಲೆ ಬಾಣವನ್ನು ಬಿಟ್ಟನು. ಕ್ಷಣದಲ್ಲಿ ಹಕ್ಕಿಯ ಕುತ್ತಿಗೆಯು ಕತ್ತರಿಸಿ ಕೆಳಗೆ ಬಿದ್ದಿತು. ನೆರೆದವರೆಲ್ಲ ಚಪ್ಪಾಳೆ ಹಾಕಿದರು. ಬಾಣ ಹೊಡೆಯುವ ಪರೀಕ್ಷೆಯಲ್ಲಿ ಅರ್ಜುನನೆ ಮೊದಲು ತೇರ್ಗಡೆಯಾದನೆಂದು ಎಲ್ಲರೂ ಅಂದರು.

ಅಭ್ಯಾಸನಗಳು:-

೧. ದ್ರೋಣಾಚಾರ್ಯರಿಗೆ ಯಾರು ಯಾರು ಶಿಷ್ಯರು ಆದರು?

೨. ದ್ರೋಣರು ಅರ್ಜುನನಿಗೆ ಯಾವ ಪ್ರಶ್ನೆಗಳನ್ನು ಕೇಳಿದರು?

೩. "ಬಾಣವನ್ನು ಬಿಡು" ಎಂದು ಅರ್ಜುನನಿಗೇ ದ್ರೋಣರು ಯಾಕೆ ಹೇಳಿದರು?

೪. ನೆರೆದವರೆಲ್ಲ ಚಪ್ಪಾಳೆ ಯಾಕೆ ಹಾಕಿದರು?

೫. ಈ ಪರೀಕ್ಷೆಯಲ್ಲಿ ಯಾರು ತೇರ್ಗಡೆ ಹೊಂದಿದರು?

೬. ಕೆಳಗಿನ ವಾಕ್ಯಗಳಲ್ಲಿ ಬಿಟ್ಟ ಶಬ್ದಗಳನ್ನು ತುಂಬಿರಿ:

ಅ) ದ್ರೋಣಾಚಾರ್ಯರು ಅವರಿಗೆ——— ——— ಕಲಿಸುತ್ತಿದ್ದರು.

ಆ) ಕ್ಷಣದಲ್ಲಿ ಹಕ್ಕಿಯ ಕುತ್ತಿಗೆಯು ———ಬಿತ್ತು.

ಇ) ಬಾಣ ಹೊಡೆಯುವ———ಯಲ್ಲಿ, ಅರ್ಜುನನು——— ಹೊಂದಿದನು.

ಈ) ಪೇರಲ, ದಾಳಿಂಬ, ಮಾವು, ದ್ರಾಕ್ಷಿ, ಇವು——— ಹೆಸರು.

ಉ) ಜೋಳ, ರಾಗಿ, ಅಕ್ಕಿ, ಗೋದಿ ಇವು——— ಹೆಸರು.

ಊ) ಗುಬ್ಬಿ, ಕಾಗೆ, ನವಿಲು, ಕೋಗಿಲೆ ಇವು——— ಹೆಸರು.

ಎ) ಕೆಂಪು, ಹಳದಿ, ನೀಲಿ, ಹಸಿರು ಇವು——— ಹೆಸರು.

ಏ) ಆಕಳು, ಎಮ್ಮೆ, ಆಡು ಇವು——— ಕೊಡುವ ಪ್ರಾಣಿಗಳು.

ಐ) ಎತ್ತು, ಕೋಣ, ಕುದುರೆ ಇವು——— ಪ್ರಾಣಿಗಳು.

ಒ) ಮಲ್ಲಿಗೆ, ಸಂಪಿಗೆ, ಗುಲಾಬಿ ಇವು——— ಹೆಸರು.

ಓ) ಬದನೆಕಾಯಿ, ಸವುತೆಕಾಯಿ, ಚವಳಿಕಾಯಿ ಇವು——— ಹೆಸರು.

ಔ) ಬಗರಿ, ಚೆಂಡು, ಗೊಂಬೆ ಇವು——— ಹೆಸರು.

ಅಕಸ್ಮಾತ್ತಾಗಿ – ಒಮ್ಮಿಂದೊಮ್ಮೆ
ಅಕ್ಕರೆ – ಪ್ರೀತಿ
ಅಧಿಪತಿ – ಒಡೆಯ, ರಾಜ
ಅಪೇಕ್ಷಿಸು – ಇಚ್ಛಿಸು
ಅಭಿಷೇಕ – ಜಳಕ (ಮಂಗಲ ಸಮಯದಲ್ಲಿ ಮಾಡುವ)
ಅರಿ – ವೈರಿ
ಅರವಟ್ಟಿಗೆ – ದಾರಿಕಾರರಿಗೆ ನೀರು ಹಣಿಸುವ ಸ್ಥಳ
ಅಲೆದಾಡು – ತಿರುಗಾಡು, ಅಡ್ಡಾಡು, ಹೊಯ್ದಾಡು
ಅಂಚು – ದಂಡೆ
ಆದರ – ಮರ್ಯಾದೆ, ಗೌರವ
ಇರುಳು – ರಾತ್ರಿ
ಉಡುಗೊರೆ – ಮನ್ನಣೆಗಾಗಿ ಕೊಡುವ ವಸ್ತ್ರ
ಉದಯಿಸು – ಹುಟ್ಟು
ಉಪದ್ರವ – ಕಾಟ
ಉಪಾಯ – ಹಂಚಿಕೆ
ಉಬ್ಬು – ಸಂತೋಷಪಡು
ಉರುಳು – ಸರಿದು ಬೀಳು
ಉಲ್ಲಾಸ – ಸಂತೋಷ, ಆನಂದ
ಎರಗು – ನಮಿಸು
ಒರಗು – ಮಲಗು
ಒಳಿತು – ಸರಿ, ಯೋಗ್ಯ
ಓರೆ – ದಂಡೆ
ಕದಿ – ತುಡುಗು ಮಾಡು, ಕಳವು ಮಾಡು
ಕನಿಕರ – ಸಹಾನುಭೂತಿ, ಕರುಣೆ
ಕಮತ – ಒಕ್ಕಲುತನ
ಕಷ್ಟ – ದುಃಖ, ನೋವು
ಕಾಡು – ಅಡಿವಿ, ಅರಣ್ಯ
ಕಾಳಗ – ಯುದ್ಧ
ಕಿಡಿಗೇಡಿ – ಕೆಡಿಸುವವ
ಕೇಡು – ಕೆಡಕು, ಹಾನಿ
ಕೊಕ್ಕೆ – ಮಣಿದ ತುದಿ, ಕೊಂಡಿ
ಕೋರೆದಾಡೆ – ಹದನಾದ ಹಲ್ಲು
ಗಕ್ಕನೆ – ಕೂಡಲೆ, ಒಮ್ಮೆಲೆ
ಗಗನ – ಆಕಾಶ
ಗಟ್ಟ – ಗುಡ್ಡಗಳ ಸಾಲು
ಗರ್ಜನೆ – ಒದರುವಿಕೆ
ಗೋಣಿ – ಚೀಲ
ಘೋರ – ಭಯಂಕರ
ಚಡಪಡಿಕೆ – ಕಸವಿಸಿ
ಚಂಚಲ – ಸ್ಥಿರವಲ್ಲದ
ಜಗಿ – ನುರಿಸಿ ತಿನ್ನು
ಜತನ – ಜೋಪಾನ
ತಬ್ಬಲಿ – ಅನಾಥ, ಪರದೇಶಿ
ತವಕ – ಆತುರ, ಅವಸರ
ತಂಗಾಳಿ – ತಂಪುಗಾಳಿ
ತಾರೆ – ಚಿಕ್ಕೆ, ನಕ್ಷತ್ರ
ತಿಳಿಗೇಡಿ – ಬುದ್ಧಿ ಇಲ್ಲದವ
ತುಪ್ಪಳ – ಮೆತ್ತನೆಯ ಕೂದಲು
ತೇರ್ಗಡೆಯಾಗು – ಪರೀಕ್ಷೆ ಪಾಸಾಗು, ಉತ್ತೀರ್ಣನಾಗು
ತೊತ್ತು – ಹೆಣ್ಣಾಳು
ತೋಬರಿ – ದಾಣಿ ಕಟ್ಟುವ ಚೀಲ
ಧೂರ್ತ – ಕಪಟ, ಮೋಸಗಾರ
ನನ್ನಿ – ಸತ್ಯ
ನಯ – ನುಣುಪು
ನಸುಕು – ಮುಂಜಾನೆ
ನಿಟ್ಟು – ದಿಕ್ಕು
ನಿಲ್ದಾಣ – ನಿಲ್ಲುವ ಸ್ಥಳ

ನಿಷ್ಠೆ – ದೃಢವಾದ ನಂಬಿಗೆ
ನೀಗು – ಕಳೆದುಕೊಳ್ಳು
ನುಗ್ಗು – ನೂಕು
ನೆರವು – ಸಹಾಯ
ನೆರೆ – ಸಮೀಪ
ಪತಾಕೆ – ನಿಶಾನೆ
ಪರಿಷೆ – ಜಾತ್ರೆಗೆ ಬಂದ ಜನರ ಗುಂಪು
ಪುಟ್ಟ – ಸಣ್ಣ
ಪ್ರತಿಬಿಂಬ – ಪ್ರತಿರೂಪ
ಫುಲ್ಲಲೋಚನ – ಹೂವಿನಂತೆ ಕಣ್ಣುಳ್ಳವ
ಬದುಕು – ಜೀವಿಸು
ಬಯಸು – ಇಚ್ಛಿಸು, ಅಪೇಕ್ಷಿಸು
ಬಲ – ಶಕ್ತಿ
ಬಲುಮೆ – ಬಲಾತ್ಕಾರ
ಬಳಲು – ಆಯಾಸಪಡು
ಬಳಸು – ಉಪಯೋಗಿಸು, ಸುತ್ತುಗಟ್ಟು
ಬಳಿ – ಸವರು, ಹಚ್ಚು
ಬಾನ್ – ಆಕಾಶ
ಬಿಡಾರ – ಮನೆ, ಇಳಿಕೊಂಡ ಸ್ಥಳ
ಬಿನ್ನಹ – ವಿನಂತಿ, ವಿನಯದಿಂದ ತಿಳಿಸುವುದು
ಬೀಡುಬಿಡು – ಇಳಿದುಕೊಳ್ಳು, ವಸತಿ ಮಾಡು
ಬೆಡಗು – ಜಂಬ, ಒಯ್ಯಾರ
ಭವ್ಯ – ದೊಡ್ಡ, ಸುಂದರ
ಭಾಷೆ – ವಚನ, ಶಪಥ
ಮಮತೆ – ಪ್ರೀತಿ
ಮರುಗು – ದುಃಖಪಡು
ಮರಣ – ಸಾವು
ಮಾಸು – ಹೊಲಸಾಗು
ಮಿಡುಕು – ಚಡಪಡಿಸು
ಮಿನುಗು – ಹೊಳೆ
ಮುಳುವು – ನಾಶಕ್ಕೆ ಕಾರಣ
ಮುಹೂರ್ತ – ತಕ್ಕ ಕಾಲ
ಮೂಡಣ – ಪೂರ್ವದ
ಮೂಡು – ಹುಟ್ಟು
ಯುಗ – ಕಾಲ
ರೇಗು – ಸಿಟ್ಟಿಗೇಳು, ಆವೇಶಗೊಳ್ಳು
ಲೀಲೆ – ಆಟ
ವಾನರ – ಮಂಗ
ವಿಶ್ವಾಸ – ನಂಬಿಗೆ
ವ್ಯಾಘ್ರ – ಹುಲಿ
ಶಿಸ್ತು – ಅಚ್ಚುಕಟ್ಟುತನ
ಸಜ್ಜುಮಾಡು – ತಯಾರಿಸು, ಸಿದ್ಧಗೊಳಿಸು
ಸದ್ದು – ಸಪ್ಪಳ
ಸರಕು – ಸಾಮಾನು
ಸಂಕೋಚ – ದಾಕ್ಷಿಣ್ಯ
ಸಂತೈಸು – ಸಮಾಧಾನ ಮಾಡು
ಸಾಧಿಸು – ಆಗುವಂತೆ ಮಾಡು
ಸಾಷ್ಟಾಂಗ – ಉರ, ಶಿರ, ದೃಷ್ಟಿ, ಮನ, ಮಾತು, ಪಾದ, ಹಸ್ತ, ಮೂಗು ಈ ಎಂಟು ಅಂಗಗಳೊಡನೆ ಮಾಡುವ ವಂದನೆ
ಸ್ನಾಯು – ನರ, ಮಾಂಸ ರಜ್ಜು
ಸಿರಿ – ಐಶ್ವರ್ಯ, ಸಂಪತ್ತು
ಸೇತುವೆ – ಪೂಲು
ಸೈನ್ಯ – ದಂಡು
ಹರಸು – ಆಶೀರ್ವಾದ ಮಾಡು
ಹಾಳತ – ಅಳತೆಗೆ ಹವಣ
ಹಿಂಗಾಲು – ಹಿಂದಿನ ಕಾಲು
ಹುಮ್ಮಸ – ಹುರುಪು
ಹೇರು – ಒಜ್ಜೆ
ಹೊಟ್ಟೆಬಾಕ – ಬಹಳ ಕೂಳು ತಿನ್ನುವವ
ಹೊದರು – ಗಿಡದ ಪೊಳ್ಳು, ಡೊಗರು
ಹೊಂಚು ಹಾಕು – ಜಪ್ಪಿಸು
ಹೊಂಬಣ್ಣ – ಬಂಗಾರದ ಬಣ್ಣ